# ಸುದಾಮ ಚರಿತ್ರವು.

ಸಕ್ಕರಿನಾಯಿಕ ಮಲ್ಲಿನಾಯಿಕ ಇಂಚಲ

ಇವರು ರಚಿಸಿದ್ದು

ದತ್ತಾಜೀರಾವ ಅಬಾಜೀರಾವ ಸಾವಂತ,

ಇವರು

ತಮ್ಮ ಶ್ರೀರಾಮತತ್ವ ಪ್ರಕಾಶ ಮುದ್ರಣಾಲಯದಲ್ಲಿ ಮುದ್ರಿಸಿ

ಪ್ರಸಿದ್ಧಮಾಡಿದರು.

ಸನ್ನ ೧೯೩೯ ಇಸ್ವಿ.

ಕ್ರಯ ೨ ಆಣೆ.



# ಸುದಾಮ ಚರಿತ್ರವು.

ಇದನ್ನು

ಸಕ್ಕರಿನಾಯಿಕ ಮಲ್ಲಿನಾಯಿಕ ಇಂಚಲ,

ಇವರು

ಪದ ಪದ್ಯರೂಪದಿಂದ ರಚಿಸಿದರು.



ಮತ್ತು

ದತ್ತಾಜೀರಾವ ಆಬಾಜೀರಾವ ಸಾವಂತ,

ಇವರು

ಕನ್ಮ ಶ್ರೀರಾಮತತ್ವ ಪ್ರಕಾಶ ಮುದ್ರಣಾಲಯದಲ್ಲಿ ಮುದ್ರಿಸಿ
ಅಲ್ಲಿಯೇ ಪ್ರಸಿದ್ಧ ಪಡಿಸಿದರು.



ಆವೃತ್ತಿ ೨ ನೇದು.

—:೦:—

ಸನ್ನ ೧೯೩೯ ಇಸ್ವಿ.



ಯು ೨ ಆಣೆ.



# ಪ್ರಸ್ತಾವನೆ.

ಹಿಂದಿನ ಕವಿಗಳು ಮಾಡಿದ ಸುದಾಮ ಚರಿತ್ರವೆಂಬ ಗ್ರಂಥವು ಭಾಮಿನಿ ಷಟ್ಪದಿಯಲ್ಲಿ ಇದ್ದು ಓದುವಂಥ ಜನರಿಗೆ ಆನಂದಕರ ಆಗುವದಿಲ್ಲಾ ಪದಪದ್ಯದಿಂದ ಮಾಡಬೇಕೆಂದು ನಮ್ಮ ಮಿತ್ರ ಜನರು ಹೇಳಿದ್ದರಿಂದ; ಅವರ ಮನೋಭಿಷ್ಟವು ನೇವೇರಿಸುವದಕ್ಕೋಸ್ಕರ ಈ ಸುದಾಮ ಚರಿತ್ರವನ್ನು ಕೃಷ್ಣಪಾರಿಜಾತದಂತೆ ಅನೇಕ ತರದ ಧಾಟಿ ಪದದಿಂದಲೂ ಪದ್ಯದಿಂದಲೂ ಬಹಳ ಕಷ್ಟಪಟ್ಟು ರಚಿಸಿದ್ದೇನೆ. ವಿದ್ವಜ್ಜನರು ಪ್ರತಿ ರವಿವಾರಕ್ಕೆ ಈ ಸಂಪೂರ್ಣ ಗ್ರಂಥವನ್ನು ಓದಬೇಕು. ಮತ್ತು ಓದಲಿಕ್ಕೆ ಬಾರದಂಥವರಿಗೆ ಓದಿ ಹೇಳಬೇಕೆಂದು ನನ್ನ ಪ್ರಾರ್ಥನೆ ಉಂಟು.

ಗ್ರಂಥಕರ್ತ.





# ಸುದಾಮ ಚರಿತ್ರ.



## ೧ ನೇ ಅಧ್ಯಾಯ.

ಶ್ರೀಗುರುಭ್ಯೋನಮಃ ॥ ಶ್ರೀಸಾಂಬಸದಾಶಿವಾಯ ನಮಃ ॥
ಸುದಾಮಚರಿತ್ರವು ಬರೆಯುವದಕ್ಕೆ ಶುಭಮಸ್ತು ॥
ಶೋಭನಮಸ್ತು ॥

॥ ಪದ ೧ ॥

ರಾಗ — ಸೌರಾಷ್ಟ್ರ ತಾಳತ್ರಿವಿಡಿ.

ಗಿರಜಿಸುತ ಗಜಮುಖನೆ ಪಾಲಿಸು । ಉರಗಭೂಷಣ ತನಯ ಪಾಲಿಸು ॥ ಶರಣುಮಾಡುವೆಕರುಣದಿರಲಿ ಶ್ರೀ ಕರುಣಸಾಗರನೆ ॥ ಸುರನರೋರಗರಿಂದ ವಂದಿತ । ಪರಮ ಋಷಿಗಣದಿಂದ ಸೇವಿತ । ದುರಿತವಿಘ್ನವುಪರಿಹರಿಸಿಮತಿತ್ವರಿತಕೊಡುನಮಗ ॥ ೧ ॥ ಕಮಲನಯನನಸುತನಸತಿಪದ । ಕಮಲಕ್ಕೆರಗಿನಾಬೇಡಿಕೊಂಬುವೆ । ಕಮಲಮುಖಿಶಾರದಿಯೆಕುಂಜರಗಮನೆಸಲುಹೆಂದು ॥ ಕಮಲಕೋರಕಕುಚದ ಸೌಂಧರಿ । ಭ್ರಮರಕುಂತಳೆಯನ್ನಜಿಂಹಕ । ವಿಮಲಮತಿಯನುಕೊಟ್ಟುನಿನ್ನ ಕರಕಮಲಇಡುತಾಯಿ ॥ ೨ ॥ ಮೊದಲಿಗೆಸ್ತುತಿಮಾಡುವೆನುನಾ । ಮದನಜನಕನೆಬಂದುಯನ್ನಾ।

ಹೃದಯದಲ್ಲಿನಿಂತುಸಲಹುಪದಕೆನಮಿಸುವೆನು ॥ ಪದುಮ
ನಾಭನೆನಿನ್ನ ಕೃಪೆಯಲಿ। ಸುದಾಮುಚರಿತವುಮಾಡಲೊಡಗಿದೆ।
ಮುದದಿಸಂಪೂರ್ಣವನುಮಾಡಿಸುವದಕ್ಕೆಕರ್ತನೀನೆ ॥ ೩ ॥
ನಾಗಭೂಷಣಅಗಜಿಪ್ರಿಯ್ಯನೆ । ನಾಗರಾರಿಯಗಮನಸಖ
ನೆ। ನಾಗಚರ್ಮಾಂಬರನೆಯನ್ನಯಮೇಲೆದಯವಿರಲಿ ॥
ನಾಗಗಿರಿವಾಶಾಪಾಲಿಸೆನ್ನನು । ಈಗನಿಮ್ಮಯಪಾದಕಮಲ
ಕ್ಕೆ।ಬಾಗಿನಮಿಸುವೆಬಂಕನಾಥಕೊಡುಬೇಗಸನ್ಮತಿಯಾ॥೪॥

॥ ಪದ ೨ ॥

॥ ರಾಗಪಾಡಿ ॥ ಆದಿತಾಳ. ॥

ಶರಣುಮಾಡುವೆನಾನುಸರ್ವಕವಿಗಳಿಗೆಲ್ಲಾ ॥ ಕರುಣ
ವಿಟ್ಟೀಕವಿತೆಪರಾಮರಿಸಿಲಾಲಿಸರೆಂದು ॥ಪಲ್ಲ॥ ಸೃಷ್ಟಿಯೋ
ಳೆನ್ನ ತಿಲಿಮೆಟ್ಟಹಾರುವಂಥಾ । ಶ್ರೇಷ್ಠಜಾನುಳ್ಳವರುಎಷ್ಟು
ಕವಿಗಳುಂಟು । ಅಷ್ಟುರಕೃಪೆಯಿಂದಲಿಧಿಟ್ಟಸುದಾಮುಚರಿ
ತೆ। ಸೃಷ್ಟಿಮಾಡಿರುವೆಚಿತ್ತಇಟ್ಟುಕೇಳಿರಿಯಂದು॥೧॥ ಶುದ್ಧಾ
ಶುದ್ಧವೆಂಬುಮುದ್ದೆಯುತಿಳಿಯದೆ । ವಿದ್ಯಹೀನನುನಾಮಾ
ಡಿದ್ದೆಈಕವಿತೆಆ । ಬದ್ಧವಾದಂಥಾನುಡಿಗಳಿದ್ದರೆಇದರೊ
ಳು॥ ಬುದ್ಧಿವಂತರುನೀವುತಿದ್ದಿಕೊಳ್ಳುವಿರೆಂದು॥ ೨ ॥ಧರು
ಣಿಯೋಳಿಂಚಲಪುರಬಂಕನಾಥನಾ ॥ ಚರಣಸೇವಕನಾದ
ಕವಿಸಕ್ರನಾಯಕನು । ಸರಸವಾಗೀ ಕವಿತಾವಿರಚಿಸಿರುವಾ
ಸ್ವತಃ ॥ ಪರಮಗುಣಿಕರುಕೇಳಿಹರುಷಪಡಬೇಕೆಂದು ॥೩॥

# ಕಥಾ ಪ್ರಾರಂಭ.



॥ ಪದ ೩ ॥

ಪದ್ಯ-ಒಂದು ದಿನ ಪಾರ್ವತಿಯುನಂದಿವಾಹನನಲ್ಲಿ ಬಂದುಬಹುತ್ವರದಿಂದಇಂದು ಶೇಖರನಡಿಗೆವಂದಿಸುತಕುಳಿ ತುಆನಂದದಿಂದಲಿಅರವಿಂದಲೋಚನಿತಾನುಮಂದಹಾಸ್ಯದಿ ನಗುತಅಂದಳ್ಹೀಗೆ ॥ ಇಂದುಸ್ವಾಮಿಯನಿಮಗೆಎಂದು ಪ್ರಶ್ನವು ಮಾಡ್ವೆಳಂದಾಗಿ ಪೇಳನಾಥಬಂಧುನಾಮವು ಯಾ ರಿಗೆಂದಾಕಿಕೇಳಲ್ಕೆ ಕಂದುಗೊರಳನು ಗಿರಿನಂದನಿಗೆ ಅಂದ ನಂದಕಂದನ ಹೊರ್ತ ನಾಥಬಂಧುನಾಮ್ಯಾರಿಗಿಲ್ಲೆಂದುನುಡ ದಾ ॥ ೧ ॥ ಸರಿಸಿಜಾಮುಖಿಕೇಳಿಪರಮಸಂತೋಷದಲಿ ಮುರರಿಪುಗೆ ಈ ಹೆಸರು ಬರುವದಕೆ ಕಾರಣವು ತ್ವರಿತದಲಿ ಪೇಳೆನಗೆಸರಸವಾಗಿ ॥ ಗಿರಿಜೆಮಾತವುಆಗಹರನುಲಾಲಿಸಿ ಕೇಳಿ ಹರಿಕಥಿಯಸಾರವನು ವರವೆನಾನೀಗಮನವೆರಡಆಗದೆ ಕೇಳಿದರೆ ದುರಿತದೂರಾಗಿ ಸರಿದುಹೋಗುವದೆಲ್ಲಾ ಧರಿಯೊ ಳಗೆಈಚಮತ್ಕರವುಕೇಳಿದರೆ ॥ ೨ ॥ ಪೊಡವಿಯೊಳಗೆ ಲ್ಲಸಡಗರಸುಂದರಪುರದಿಬಡಸುದಾಮನುತಾನು ಪಡದಂ- ಥಪುತ್ರರುಮಡದಿಸಹಿತಾಗೆವನುದೃಢದಿಂದಇರುವಾಗಕಡು ಪಾಪಿವಿಧಿಬಂದುಬಿಡದೆಕಾಡುತ್ತಿರಲುಬಡವನಾದಾ ॥ ಉಡ

ಲಿಕ್ಕೊ್ಕಸ್ತ್ರವುಇಲ್ಲವಡಲಿಗನ್ನಿಲ್ಲೆಂದುಕಡು ಚಿಂತೆಯಿಂದಲ್ಲಿ ಮಿಡಿಕಿಚಿಂತೆಂಬುವಾಕಡಲೊಳಗೆಮುಳಿಗಿತಾಧಡವು ಕಾಣದೆ ಯಿರಲುಸುಡುಜನ್ಮಸಾಕೆಂದುಮಡದಿಗೆಸುದಾಮನುಡದನೀ ಪರಿಯು ॥ ೩ ॥

ಪದಾ ೨.

ತಾಳ-ಅಷ್ಟತಾಳ

ಮನಸೀಜಾಪಿತನುಯನ್ನಾಜನಿಸಿದನುಯಾತಕ್ಕೆ ॥ ಮನಿಯುವಂಬುವದೊಲ್ಲದು । ಮನಸುನಿಲ್ಲದು ॥ ೧ ॥ ಮಂದಗಮನಿಕುಚೆಲಿಅಂದಳೀಪರಿಮಾತು ॥ ಮಾತು ॥ ವಂದುಚಿಂತಿಲ್ಲವುನಿಮಗ । ಇಂದುಯಾಕೀಗ ॥ ೨ ॥ ಸುಂದರಿನೀಕೇಳೆನ್ನಾಕಂದಿರಿಗನ್ನಿಲ್ಲೆಂದು । ಬಂದಿತುಚಿಂತಿಯುಯನಗೆ । ನೊಂದೆಮನದಾಗ ॥ ೩ ॥ ಕಷ್ಟವ್ಯಾತಕ್ಕೆ ಇದಕೆಸೃಷ್ಟಿಕರ್ತನುತಾನು । ಎಷ್ಟುಬರದಿಹನುಅದು । ಅಷ್ಟುತಪ್ಪದು ॥ ೪ ॥ ಪಂಕಜನಾಭನಸಖಾಬಂಕನಾಥನುಯನಗ ॥ ಶಂಕವಿಲ್ಲದೆಂದಿಗೊಲದಾನು । ಕಿಂಕರನುನಾನು ॥ ೫ ॥

ಪದಾ ೩.

ರಾಗ-ಸಾರಂಗತಾಳಅದಿ

ಇಂತೆಲ್ಲಾಹೇಳಿಸತಿಸಂತೈಸುತ್ತಿರಲು । ಅಂಥಾಸಮಯಕೆತಾಹೀಗಂತನುಡದಾನು ॥ ಕಂತುಪಿತಯನಗಅತ್ಯಂತ

ಸ್ನೇಹಿತನು । ಅಂಥವನನುರತುನಾವುಚಿಂತಿಸುವದ್ಯಾಕೆ ॥ ೧ ॥ ಬಾಲತ್ವದಲಿಯನ್ನ ಯಮೇಲೆಕೃಪೆಬಹಳಾ । ಶಾಲಿಯೊಳುನಾವುಗುಣಶಾಲಿಗಳುಕೇಳು ॥ ಪಾಲಿಸುವದ್ವಾರಕಾನೀಲವರ್ಣನು । ಶೇಲರಾಜರಲ್ಲಿಮೇಲತಾನಾಗಿ ॥ ೨ ॥ ನಾನೀಗಪೋಗುವೆಆನಾಥನಬಳಿಗೆ । ಏನಾದರುಕೊಟ್ಟಾನು ಆನಂದದಿಂದ ॥ ದಾನವಾಂತಕಯನ್ನಾ ಖೂನಾಹಿಡದಾನು। ಮಾನದಿಂದೆನಗೆಸನ್ಮಾನಾಮಾಡ್ಯಾನು ॥ ೩ ॥ ಮುರವೈರಿಯಾದಂಥಾಹರಿಬಳಿಗೆನಾನು। ಬರಿಗೈಲೆಪೋಗುವದುಥರವಲ್ಲಾಇದು ॥ ಸರಸಿಜಾಕ್ಷಿಯಕೇಳಿಪರಮಸಂಭ್ರಮದಿ। ಯರಡಮುಷ್ಟೆವಲಕ್ಕಿನೆರೆಮನಿಯಲ್ಲಿ ॥ ೪ ॥ ತರಿಸಿಕಟ್ಟಿದಳುತಾಹರಕವಸ್ತ್ರದಲಿ । ಹರುಷಾದಿಂಪೋಗೆಂದುವರಿದುಕಳುಹಿದಲು ॥ ವರಬಂಕನಾಥನಾತ್ವರದಿಪೂಜಿಸಿ। ಅರಮನೆಯನುಬಿಟ್ಟುಹೊರಹೊಂಟನಾಗ ॥ ೫ ॥

॥ ಪದ ೪ ॥

ರಾಗ—ಭೈರವಿ ಅಷ್ಟತಾಳ.

ಸುಂದರಿಗೆಹೇಳಿನಡದಭಂದದಿಂದಲಿ । ಕಂದರೆಲ್ಲಾಜೋಕಿಇರ್ರ್ಯಾನಂದದಿಂದಲಿ ॥ ೧ ॥ ಯಂದುಹೇಳಿಹರುಷದಿಂದಮುಂದನಡದನು । ಅಂದವಾದಶಕುನದೃಷ್ಟಿಂದಕಂಡನು ॥ ೨ ॥ ಹಂಗಹಾರಿಹೋಗಿಯಡದಂಗಕಟ್ಟಿತು । ಕಂಗಳಿಂದನೋಡಿದೆಡಕಮುಂಗಲೋಡಿತು. ॥ ೩ ॥ ಭಾರ

ಕುಚದಯುವ್ವನಸ್ಥಾನಾರೆರಿಬ್ಬರು । ದಾರಿಹಿಡಿದುಯರಡ ಕೊಡವುನೀರುತಂದರು ॥೪॥ ಖಾಸಮಲ್ಲಿಗೆಹಾರುಗಳನು ಸೊಶಿಕೊರಳಲಿ । ವೇಶಿಬಂದಳಾಗಲುಲ್ಹಾಸದಿಂದಲಿ ॥೫॥ ದ್ವಿಜರುಈರ್ವರುಬಂದರುಹರಿಯಭಜನಿಮಾಡುತಾ। ಧ್ವಜವು ಮುಂದಇದರುಬಂತುಗಜವುನಡೆಯುತಾ ॥ ೬ ॥ ಬರುವ ಶಕುನಕಂಡುಸುದಾಮಗ್ಹರುಷಉಕ್ಕಿತು । ಹರಿಯಭೆಟ್ಟಿ ಆಗುವದೆಂದುಭರವಸಾದಿತು ॥ ೭ ॥ ಊರದಾಟಹೋಗಿ ನರಿಯಮಾರಿಕಂಡನು । ಘೋರದುಃಖಹೋಗುವದೆಂದು ಪೂರತಿಳಿದನು ॥ ೮ ॥ ನಾಯಿಮೊಲವುಚಿಗರಿಯಡಕಹಾ ಯಿಮವ್ರೋಡುತಾ । ಹಾಯಿದುಮಹಾಒಳ್ಳೆಶಕುನವಾಯಿ ತೆನವುತಾ ॥ ೯ ॥ ಸಿಂಧುಶಯನಕಮಲನಯನನೆಂದುಭಜಿ ಸುತಾ । ಮಂದರೋದ್ಧರಮುಕುಂದನೆನವುತಾ ॥ ೧೦ ॥ ವಡಿಯಬಂಕನಾಥನಸಖನಅಡಿಸ್ಮರಿಸುತಾ । ನಡದಸುದಾಮ ಮುಂದಕ್ಕಡಿಯಇಡವುತಾ ॥ ೧೧ ॥

॥ ಪದ ೫ ॥

ರಾಗ— ಕಾಂಬೋರಿ ಆದಿತಾಳ.

ಆರತಾಸುಬಿಸಲಿನೊಳಗೆದಾರಿಹಿಡಿದುಹೋಗುತಿರಲು। ನೀರಡಿಕಿಬಹಳಾಗಿಸುದಾಮಘೋರಬಡುತ್ತಿರಲು ॥ ವಾರಿ ಯನ್ನುಹುಡಿಕಿಕೊಡವುನೀರುಕುಡಿಯುವೆನೆಂದುತಾನು । ಬಾ ರಿಬಾರಿಗೆನೆನಸುತಕಂಡಾದೂರದಿವಂದೊನವಾ ॥೧॥ ನಂದ

ನವನದಿಪೋಗಿತಾನುಬಂದುನೀರಿನಸ್ಥಳವುಕಂಡು ಬಂದುಕು ಳಿತಾನಲ್ಲೆತಾಆನಂದದಿಂದಲಿ ॥ ಛಂದಾದಕೊಳಲೊಳು ಸ್ನಾನಸಂಧ್ಯಾವಂದನೆಯನ್ನುಮಾಡಿ । ಇಂದಿರಾಪತಿಪೂಜಿ ಯಮಾಡಿವಂದಿಸಿದನಾಗ ॥ ೨ ॥ ಹಲಸುನಿಂಬೆತೆಂಗು ಕಿತ್ತಳೆಚಲುವಸೀತಾಫಲವುಮತ್ತ । ಬಲುಗೊನೆಯಿಂದೆಸುವ ಕದಳಿಕೋಮಲಖರ್ಜುರವನ್ನು ॥ ಲಲಿತವಾದನೀರಲದ್ರಾ- ಕ್ಷೆಹಲವುಕಾಲಾಇರುತಿಹವಲ್ಲೆ । ಕೆಲವುಫಲಗಳನೆಲ್ಲಾಆಗ ಸಲಿಸೆಂದನುಹೀಂಗ ॥ ೩ ॥ ಮಲ್ಲಿಗೆಶಾವಂತಿಗೆಯುಅಲ್ಲಿ ಗಲ್ಲಿಗೆ ರಸವುತಿರ್ದವು ಸಲ್ಲಲಿತೆಸುರಹೊನ್ನೆ ಕೇತಕಿಯಲ್ಲಾ ನೋಡುತಲಿ ॥ ನಿಲ್ಲದೆಬಂಕನಾಥನಧ್ಯಾನದಲ್ಲಿನಡದವನವ ಬಿಟ್ಟು । ಫುಲ್ಲನಾಭನಭೆಟ್ಟಿಗಾಗಿಅಲ್ಲಾದದಿಂದಾ ॥ ೪ ॥

॥ ಪದ ೬ ॥

ನಡದುಸುದಾಮಮಾರ್ಗ್ದಿಡದುಕೃಷ್ಣನಸ್ಮರಣಿಬಿಡದೆ ಮಾಡುತಬರಲುಕಡಲದಾಮಧ್ಯದಲಿವಡಿಯಕೃಷ್ಣನಪುರವು ಕಡುತವಕದಲಿಕಂಡುಧಡದಬಳಿಯಲಿಬಂದಮಡದಿಕೇಳಗಜೆ ಕಡಲವಿಸ್ತರ ಪೇಳ್ವೆದ್ರುಢಮನದಿನೀಕೇಳುಧಡಧಡನೆಬರುವಂ ಥಹೋಡುಹೊಡುವಥೆರೆಗಳು ನಡುನಡುವೆಯಿರುತಿಹವುಮ ಡುಖಿನಾಗುಂಪಿನಲಿಘುಡಿಘುಡಿಶಿ ಮೀನಮೊಸಳೆಅಡಭಡಿಸು ತ್ತಿಹವು ॥ ೧ ॥ ಸುರಪತಿಯಕೂಡಿಸುಗರ್ವನಮುಗ್ಯಾಕೆಂದು

ಪರಮಪರಮಪೀರೆಂದಿಗಾದರು ಬಿಡಸು ನಮ್ಮನ್ನು ಶರ
ಣತ್ಹೋಗಬೇಕೆಂದು ಗಿರಿಬಂಧವೆಂಬೋಲು ಥೆರೆಗಳುವಂದ
ಕೊಂದರಮೇಲೆ ಬರುತಿರ್ದವುಪರಿಪರಿಯರೀತಿಯಲಿಯಿರುವ
ಸಾಗರನೋಡಿತ್ವರಮಾಡಿ ಮುಂದಕ್ಕೆಬರುತನೋಡಿದದ್ವಿಜನು
ಹರಿಪಟ್ಟಣದ್ವಾರಕಾಪುರದ ಬಾಗಿಲಕಂಡು ಹರುಷವಾಯಿತು
ಮನಕಬೆರತನಿಂತಾ ॥ ೨ ॥ ಯತ್ರೆತ್ರನೋಡಿದರುಮುತ್ತಿ
ನಾಕೋಟಗಳು ರತ್ನಮಯಗೋಪುರವು ಕೊತ್ತಲಿಗೆವೈಡೂ
ರ್ಯಕೆತ್ತಿಸಿದತೆನೆಗಳುಸುತ್ತಲೆ ರಂಜಿಸುವಉತ್ತಮಉದಕವಿ
ಚಿತ್ರಶಾಲಾ ॥ ಮತ್ತೆವಿಸ್ತರನೋಡಿಚಿತ್ತದೊಳುಹಿಗ್ಗುತಲೆ
ಹೊತ್ತುಆಯಿತುಯೆಂದು ಚಿತ್ತಜನಪಿತನಲ್ಲಿವತ್ತರದಿ ಬರು
ವಾಗಯಿತ್ತದ್ವಾರಪಾಲಕರು ಅತ್ತತ್ತನಿಲ್ಲೆಂದುವತ್ತಿನುಗಸಿ
ದರು॥ ೩ ॥

॥ ಪದ ೬ ॥
ರಾಗ-ಪೂರ್ವಿ ತಾಳಬಿಲಂದಿ.

ನಿಲ್ಲೊನಿಲ್ಲೊನಿಲ್ಲೊಹೊರಗೆ। ಹೇಪಾರ್ವನೀನು ॥
ನಿಲ್ಲೊನಿಲ್ಲೊನಿಲ್ಲೊಹೊರಗೆಯಲ್ಲಿಯಿಂದಬಂದಿಮುಂದ ॥
ಯಲ್ಲಿಪೋಗುವಿನಮಗಿಲ್ಲನೀನುಹೇಳುವರಿಗೆ ॥ ಪಲ್ಲ ॥
ನಿನ್ನನಾಮುಏನುಮತ್ತೆನಿನ್ನಪುರದಹೆಸರವೇನು । ಘನ್ನ
ರಾಜನಬಳಿಗೆಮುನ್ನ ಈಗಪೋಗುದ್ಯಾಕೆ ॥ ೧ ॥ ಕೃಷ್ಣನ
ಅಪ್ಪಣಿಇಲ್ಲದಲೆನೆಟ್ಟನೊಳಗಪೋಗುತ್ತಿಹನು । ಧಿಟ್ಟತನ-

ವನೋಡಿರೆಂದು ಸಿಟ್ಟನಿಂದಅಂದರ್ಹೀಗೆ ॥ ೨ ॥ ಬಂಕ
ನಾಥನಮಿತ್ರನಾದಪಂಕಜನಾಭನುಆವನ । ಕಿಂಕರರುನಾವು
ನೀನುಶಂಕವಿಲ್ಲದೆಯಲ್ಲಿಪೋಗುವಿ ॥ ೩ ॥

ಪದಾ ೮.

ತಾಳಬಿಲಂದಿ.

ನಾಮುನಮ್ಮದುಕೇಳರಿಬೇಗ । ಸುದಾಮನೆಂದುಕರಿ
ಯುವರೆನಗೆ ॥ ಪಲ್ಲ ॥ ಸುಂದರಾಪುರಪಟ್ಟಣಾರುವದು ।
ಅಲ್ಲಿಮಂದಿರಕೇಳರಿನಮ್ಮದು ॥ ೧ ॥ ಸತಿಯುಕೂಚೆಲಿ
ಕೇಳರೆಲ್ಲರು । ನನ್ನಸುತರುಸುದ್ದಾಅಲ್ಲೆಇರುವರು ॥ ೨ ॥
ಕೃಷ್ಣನಭೆಟ್ಟಗೆಬಂದೆನು । ನನ್ನಇಷ್ಟಮಿತ್ರನುಆವನು
ಕುಂದನು ॥ ೩ ॥ ಇಷ್ಟಮಾತಕೇಳಿದೂತರು । ಆವಗಸ್ಪಷ್ಟ
ಮಾತಿನಿಂದನುಡದಾರು ॥ ೪ ॥ ಕೇಳಿಬಂಕನಾಥಸಖನನ್ನು।
ಬಂದುಪೇಳುವೆಆದಂಥಾಅಪ್ಪಣಿಯನು ॥ ೫ ॥

ಪದಾ ೯.

ರಾಗಃ—ಪೂರ್ವಿ ತಾಳಬಿಲಂದಿ.

ಬಂದುಸುದಾಮಾ । ಹರಿಯೆ ॥ ಬಂದಹರಿಯೆಸುಂದ
ರಾಪುರದಿಂಡನಿಮ್ಮಮಂದಿರಕ್ಕೆ ॥ ಪಲ್ಲ ॥ ಸಣ್ಣವಯಸ್ಸಿ
ನಲ್ಲಿನಿಮ್ಮಘನ್ನಗೆಳಿಯನಂತಆವನು । ಪನ್ನಗವೈರಿವಾಹ
ನಕೇಳುನಿನ್ನಭೆಟ್ಟಗ್ಯಾಗಿಯೀಗ ॥ ೧ ॥ ಮುಂದಯಿದಕ್ಕೆ

ಅಪ್ಪಣೆಕೊಡನುಭಂದದಿಂದಪೇಳಿದರೆ । ಮುಂದರೋದ್ಧರನೀವು
ಅವಗಳಅಂದವಮಾತುತಿಳಸುವೇವು ॥ ೨ ॥ ನೀಲವರ್ಣಕೇಳಿ
ನಗುತಬಾಲಕತ್ವದಗೆಳಿಯಬಂದ । ಆಲಯಕ್ಕೆಕರಿಯರೆಂದು
ಹೇಳಿದಾನುಸರ್ವರಿಗೆ ॥ ೩ ॥ ಶೌರಿಮಾತುಬಂಕನಾಥನವೈ
ರಿಕೇಳಿಹರುಷದಿಂದ । ಮಾರಬಲವುಶ್ರಿಂಗಾರಿಸಿದಪೂರ್ವ
ನನ್ನು ಕರಿಯಲಿಕ್ಕೆ ॥ ೪ ॥

ಪದ್ಯ ೧೦.

ಮನ್ಮಥಾಸಾತ್ಯಕಿಯುಅನಿರುದ್ಧಗದಸಾಂಬಪನಜನಾ
ಭನಸುತರುಇನಿತುಯಲ್ಲರು ಆಗದಿನಕರನಪ್ರಭೆಯಂತೆಮ
ಣಿಖಚಿತವಾದರಥವನುಯೇರಿನಡದರುಅನಿಮಿಷರಹಾಗೆ ॥
ಗಣನೆಯಿಲ್ಲದಸೈನ್ಯ ಘನವಾದಕುಡರಿಗಳನು ಯೇರಿಕೊಂ
ಡಾಗಟಣಟಣನೆ ಜಿಗಸುತಲೆಧ್ವನಿಮಾಡಿನಡಿಯುತಾ ಜಿನವು
ಹೊರಟತುಆಗ ಮನಸಿಜಾಹೇಳಿದಾಅನುಮತಿಯಂತೆ ॥೧॥
ಕರಿಯಹಿಂಡುಗಳನ್ನು ತರಿಸಿಚೌಡಾಲವನುತ್ವರಿತದಿಂದಲಿಬಿಗ
ದುಕೊರಳಲ್ಲಿಗಂಟಿಚ್ಯಾಮರ ಸೊಂಡಿಯಲಿ ಕೊಟ್ಟುಸುರರಿ
ಗೊಡಿಯನಹರಿಯಸರಿಯಾಗಿತೋರುವವುಸರಸವಾಗಿ ॥ ತು
ರಗಗಳತರಿಶ್ಯಾಗವರಜೀನಗಳ ಹಾಕಿಶಿರಮೇಲೆವುಮಾಯಗರಿ
ಯನುಇಟ್ಟುಶ್ರಿಂಗರಿಸಿದರು ಕುದುರೆಗಳ ಪರಿಪರಿಯರೀತಿ
ಯಲಿಹರಿಯಸಖನನ್ನು ಕರತರುವದಕ್ಕೆ ॥ ೨ ॥ ಮುತ್ತೈದಿಸ

ತಿಯರುಮುತ್ತಿನಾರುತಿಯವರುಮತ್ತಗಾಯಕದವರು ಬೆತ್ತ
ಬೆಳ್ಳಿದುಪಿಡಿದುವತ್ತಿವಡರುವ ಭಟರುಯತ್ತೆತ್ತನೋಡಿದರುಕ
ತ್ತಿಕಠಾರೆವರುಸುತ್ತನಿಂತಿಹರು ॥ ಉತ್ತುವೋಸ್ತ್ರಗಳುಟ್ಟುಕೆ
ತ್ತಿಶಿದರ್‍ಯಾಗುಟಿಯನೆತ್ತಿಯಲ್ಲಿಟ್ಟಂಥಾನೃತ್ತಿಸುವ ಸ್ತ್ರಿಯರು
ವತ್ತರದಿಬಡುವನವಬತ್ತುನಗಾರೆವರು ಜತ್ತಾಗಿಬಲಹೀಂಗ
ಮತ್ತಬರುತಿಹದು ॥೩॥ ಯದುಪತಿಯದಂಡಿನಾಕುದರಿಗಜ
ಗಳುಬರುವದಕೆಕೆಂದೂಳಹಾರಿಪದದತುಳತಕ್ಕೆಭೂಮಿಅದರಿ
ತಳವುಳಿಸಿತುಹದಿನಾಲ್ಕುಲೋಕವುಗಜಗಮಿಶಿಸುರರೆಲ್ಲಾ ಹೆ
ದರಿದರುಆಗ ॥ ಮದನಸಾತ್ಯಕಿಸಹಿತಇದರುಬರುತಿರಲಾಗ
ಬೆದರಿಸುದಾಮನಾಯದಿವಡದುಅಂಜಿತಾ ಇದು ಏನುಬಂತೆಂ
ದುಗದಗಡನೆನಡಗುತಲೆಪದಮನಾಭನೆ ಬಂದುವದಗಿಕಾ
ಯೊ ॥ ೪ ॥ ಮಂದರೋದ್ಧರನಸುತಬಂದುಸುದಾಮಗೆ
ವಂದನೆಯುಮಾಡಲ್ಕೆಮುಂದಿನೂರಬಲವೆಲ್ಲಬಂದುಬಹುಸಂ
ತೋಷದಿಂದವಂದಿಸಿತಾಗಆಂದಸುದಾಮಆನಂದಆದಾ ।
ಸಿಂಧುಶಯನನಕಥೆಯುಬಂದುಮನಸಿಲೆಕೇಳ್ವಮುಂದಿಗ್ಯಾಗು
ವದುಆನಂದವೃಷ್ಟಿಯುಸತ್ಯಬಂದಭಯವ್ರೋಡುವದುಬಂಧ
ನವುಕಡಿಯುವದು ಇಂದಬಂಕನಾಥನಾಭಂದ ಪಾದಗದಯ
ದಿಂದಮುಗದಿತುಇಲ್ಲಿಗೊಂದುಅಧ್ಯಾಯಾ ॥ ೫ ॥

---

# ೨ ನೇ ಅಧ್ಯಾಯ



**ಪದಾ.**

ರಾಗ-ಸೌರಾಷ್ಟ್ರ ತಾಳತ್ರಿವಿಡಿ.

ಮುಂದಕೇಳಿರಿಭಂದದಿಂದಲಿ । ಮುಂದಗಮುನಿಯರಾ ಸುದಾಮಗೆ । ಬಂದುಆರುತಿಯತ್ತಿದರುಆನಂದದಿಂದಲಿ ॥ ಅಂದಣದಲ್ಲಿ ಕುಳ್ಳಿರಿಸಿಹರಿಮಂದಿರಕ್ಕೆ ತರುತಣದರು । ಮುಂದಿಯಡಬಲದಲ್ಲಿಬಹುಕಿಕ್ಕಿಂದವಾಗಿಹದು ॥ ೧ ॥ಹರಿಯುಸಖನುಬರುವನೆಂದುಪುರದಜನರುತಮ್ಮಗೃಹಗಳ । ತ್ವರಿತದಲಿಶ್ರಿಂಗರಿಶಿದರುಪರಿಪರಿಯರೀತಿಯಲಿ ॥ ಧರಿಗೆಪನ್ನೀರವನುಹೊಯದರು । ಹರುಷದಿಂದಲಿತೋರಣಗಳು । ತರಿಶಿಕಟ್ಟಿದರಾಗಗೃಹಕ್ಕೆಸರ್ವಕೇರಿಯುಲಿ ॥ ೨ ॥ ಯತ್ತನೋಡಿದರತ್ತತೋರುವುಮುತ್ತಿನಂಗಡಿಶಿಸ್ತವಾಗಿ । ಉತ್ತಮದಮಾಣಿಕವಜ್ರವುರತ್ನಸಹಿತಾಗಿ ॥ ಸುತ್ತುಮುತ್ತಲಿನೋಡುತಲಿಆವ । ಮತ್ತಕಂಡನುವೇಶಿಯರನಾ । ಚಿತ್ರದೊಳುಬೆರಗಾದಪಾರ್ವನುನೋಡಿಸಂಭ್ರಮವಾ ॥ ೩ ॥ ವಾರಸನ್ನು ಕೂಡಿಸರ್ವಕೇರಿಯುನ್ನುನೋಡುತ । ಪಾರ್ವಬಂದನುಮನಸಿನೊಳಗೆಹರುಷಉಕ್ಕುತಲಿ ॥ ಚ್ಯಾರುಬಂಕನಾಥಸಖನಾ । ದ್ವಾರಕಾಪುರನೋಡಿದ್ವಿಜನು । ಮೂರುಲೋಕದವಳಗೆಇದರಸರಿಯುಇಲ್ಲೆಂದಾ ॥ ೪ ॥

ಪದ್ಯ ೧೨

ದ್ವಾರಕಾವಾಸಗೆದ್ವಾರಪಾಲಕಬಂದುಸಾರಿ ಹೇಳಿದ ಮುರವೈರಿಯುಕೇಳು ನಿನ್ನ ಪೂರ್ವದಾಸ್ನೇಹಿತನುವಾರಬಲ ವ್ರುಸಹಿತಾಗಿದ್ವಾರಕಬಂದೀಗಧೀರಕೇಳೆಂದಾ ॥ ಮಾರಪಿತ ಕೇಳ್ಯಾಗಚ್ಯಾರುಮಂಚವನಿಳಿದುಪಾರ್ವನಾಭೆಟ್ಟಿಗ್ಹದಿನಾರು ಸಾವಿರದಿವ್ಯ ನಾರಿಯುಕೊರಳಲ್ಲಿ ಪಾರಿಜಾತದಪುಷ್ಪದ್ಹಾರವ ಹಾಕಿನಡದರುದ್ವಾರಬಿಟ್ಟು ॥ ೧ ॥ ಬಂದುಕೃಷ್ಣನುಆಗ ಮಂದಹಾಸ್ಯದಿನಗುತಸುಂದರಾಪುರದಿಂದ ಇಂದಗೆಳಿಯನೆ ಬಂದಿಎಂದು ವಂದಿಸಲಿಕ್ಕೆ ಮುಂದಸುದಾಮುಮುಕುಂದನಾ ಅಪ್ಪಿಆನಂದಆದಾ ॥ ಇಂದಿರೇಶಗೆತಿರಗಿಛಂದದಿಸುದಾ ಮುವಂದನೆಮಾಡಲ್ಕೆಕಂದುಗೊರಳನಸಖನು ಅಂದಾಗದ್ವಿಜ ನಿಗೆಇಂದುನನ್ನ ಪಾದಕ್ಕೆವಂದಿಸುವಬಗಿದಾವದೆಂದು ಕೇಳಿ ದನು ॥ ೨ ॥

ಪದ ೧೩.



ರಾಗ:—ಅಷ್ಟತಾಳ

ನೀರಿನೊಳಗೆ ಪೊಕ್ಕು ಚ್ಯಾರುವೇದವತಂದ ನಿಮ್ಮ ಪಾದಾ । ಕೂರ್ಮಾವತಾರವಾಗಿಭಾರವುಹೊತ್ತಂಥಾನಿಮ್ಮ ಪಾದಾ ॥ ೧ ॥ ವರಾಹರೂಪವುಆಗಿಕನಕಾಸುರನಕೊಂದ ನಿಮ್ಮಪಾದಾ । ನರಸಿಂಹರೂಪಾಗಿಕರಳವುಹರದಂಥಾನಿಮ್ಮ ಪಾದಾ ॥ ೨ ॥ ಪಾರ್ವನಾಗಿಭೂಮಿಮೂರಡಿಮಾಡಿದನಿಮ್ಮ

ಪಾದಾ ॥ ಧರಹರಿಯೆನೀವುಭಾರ್ಗವನಾದಂಥಾನಿಮ್ಮಪಾದಾ ॥ ೩ ॥ ಜನನಿಯಶಪಥಕ್ಕೆವನವನತಿರಿಗಿದನಿಮ್ಮಪಾದಾ। ಘನವಾದನೀರೊಳುಘಣಿಯನ್ನು ಮುಟ್ಟಿದನಿಮ್ಮಪಾದಾ। ॥ ೪ ॥ ಸತ್ಯವುಬಿಡಿಸಿಅಸತ್ಯವುನಡಿಸಿದನಿಮ್ಮಪಾದಾ। ಹತ್ತಿವಾಜಿಯನ್ನುಕತ್ತಿಯುಪಿಡಿದಂಥಾನಿಮ್ಮಪಾದಾ ॥ ೫ ॥ ಬಂಕನಾಥನಪ್ರಿಯ್ಯಪಂಕಜನಾಭನೆನಿಮ್ಮಪಾದಾ। ಮಂಕು ಮನುಜರಬಿಂಕವಬಿಡಿಸುವನಿಮ್ಮಪಾದಾ ॥ ೬ ॥

ಪದ್ಯ ೧೪.

ಹೀಗೆಂದುಸುದಾಮ ಆಗಸ್ತುತಿಮಾಡಲ್ಕೆ ನಾಗವೇಣಿಯರೆಲ್ಲಾಬೇಗಆರುತಿಛಂದಾಗಿಬೆಳಗುತ್ತಿರೆ ಆಗಕೃಷ್ಣನುದ್ವಿಜಗೆಬೇಗದಿಂದಲಿಗೃಹಕೆಸಾಗಿರೆಂದಾ ॥ ಬಾಗಿಲವದಾಟೆವರುಹೋಗಿಸಿಂಹಪೀಠದಾಮೇಗಕುಳ್ಳಿರಿಶೇವಗಆಗಪೂಜಿಯುಮಾಡಿಬಾಗಿನಮಸ್ಕರಿಸಲ್ಕೆನಾಗರಿಯುಗಮನಸೀಗೆಂದಸುದಾಮಆಗಹರುಷದಲಿ ॥ ೧ ॥

ಪದಾ ೧೫.

ರಾಗ—ಪೂರ್ವಿ ಆದಿತಾಳ.

ಮುರಾರಿಮಾಧವಾನಿಮಗೆ। ನಮೋನಮೋ ॥ ಮುರರಿಪುನೀವೀಧರಿಯರಚನಿಗೆವರವೇದಬ್ರಹ್ಮನಕರದಲಿ ಕೊಟ್ಟರಿ । ದುರುಳಾದಶಂಕಾಸುರದೈತ್ಯಾವಯ್ಯತಿರಿಗಿವೇದ

ತಂದಿಹರಿಯೊಳುಪೊಕ್ಕು ॥ ಪಲ್ಲ ॥ ಸಿಂಧುವಿನಾಮಥ ನಿಶಿದಿ । ಅದರೊಳಗೆ।ಬಂದರತ್ನವೃತೆಗಸಿದಿ ॥ ಮಂದರಾದ್ರಿ ಬೆನ್ನಿಂದನೆಗಿವಿದಿಜಮುಂದವರಹನಾಗಿತಂದಿಪೃಥ್ವಿಯಾ । ಕಂದಪ್ರಲ್ಹಾದನತಂದಿಕಾಡಲುಅಂದಿಗೆವನನೀಕೊಂದಹಾಕಿದಿ ॥ ೧ ॥ ಪೊಡವಿಮೂರಡಿಮಾಡಿದಿ । ವಾಮನನೆಂಬಾ । ಬಡವಬ್ರಾಹ್ಮಣನೀನಾದಿ । ಕೊಡಲಿಪಿಡಿದುಶಿರಕಡದಿಮಾತಿದು ಆಡಿವಿತಿರಿಗಿದಿ ಮಡದಿಯಕಳದು । ಬಿಡದೆಕಪಿದಂಡವಡಗೂಡಿಬೇಗನೆಕಡಲಕಟ್ಟಿತಂದಿಬಿಡಿಶಿಶೀತಾನಾ ॥ ೨ ॥ ಮಾತಿಬಂಧನಬಿಡಿಶಿದಿ । ಮಹಾಕ್ರೂರವಾದ । ಪೂತನಿಯನ್ನು ನೀಕೊಂದಿ ॥ ನೀತಿಬಿಡಿಶಿಅವನೀತಿಹಿಡಿಶಿಬಂಕಸಾಥನಿಂದಘಾತಿಸಿದಿತ್ರಿಪುರಾ । ಪ್ರೀತಿಯಿಂದನೀಕೂತವಾಜಿಮೇಲೆದೈತ್ಯರಿಗೆಮಹಾಭೀತಿಹಾಕಿದಿ ॥ ೩ ॥

## ಪದಾ ೧೬.

ರಾಗ—ರೇಗುಪ್ತಿ. ತಾಳ ರೂಪ.

ಕಮಲನಾಭನೆರಕ್ಷಿಸು । ಮುಕ್ಕುಂದಾ । ಕಮಲನಯನನೆರಕ್ಷಿಸು ॥ ಕಮಲಸಂಭವಜನಕರಕ್ಷಿಸು । ಕಮಲಬಾಣನಪಿತನೆರಕ್ಷಿಸು । ಕಮಲಹಿತಶತಥೇಜರಕ್ಷಿಸು । ಕಮಲಕಹಿತನಮಗಳನಾವನೆ ॥ ಪಲ್ಲ ॥ ದ್ರೌಪತಿನೆಳದೊಯಿದು । ಶೀರಿಯನ್ನು । ಕೋಪದಿಶಳೆಯುತ್ತಿರೆ ॥ ಶ್ರೀಪತಿ

ಯೆನಿನ್ನ ಧ್ಯಾನವಮಾಡಲುಆಪತ್ತಿಗೆನೀಹೋಗಿಬೇಗ । ಪಾಪಿ ಕೌರವರನ್ನೆಲ್ಲಾಆಗಭೂಪನೀನುಹೊಡಿಸಿಬಿಟ್ಟ ॥ ೧ ॥ ಇಂದಿರೇಶಅಚ್ಯುತಾ । ರಕ್ಷಿಸುನೋ । ವಿಂದಹರಿಯೆಮಾಧವಾ ॥ ಮಂದರೋದ್ಧರಭಕ್ತವತ್ಸಲನಂದಗೋಪಿಯ ಕಂದನೆ । ಸಿಂಧುಬಂಧನಗೈದರಾಮಚಂದ್ರಯನ್ನ ರಕ್ಷಿಸು ॥ ೨ ॥ ದ್ವಾರಕಾವಾಸನನೆಆಳುವಿಹದಿ । ನಾರುಸಾವಿರ ನಾರೇರನಾ । ಚ್ಯಾರುಬಂಕನಾಥಸಖನೆನಿನ್ನಾ । ಆರುಶಾಸ್ತ್ರ ಹೊಗಳುತ್ತಿಹವು । ಘೋರದುಃಖವುದೂರಮಾಡಿಪಾರ ಮಾಡೋಹರಿಯಯನ್ನಾ ॥ ೩ ॥

ಪದಾ ೧೭.

ರಾಗ—ಶಂಕರಾಭರಣ. ತಾಳ ರೂಪ.

ಬಿಡದೆಹರಿನಾಮವುಅಡಿಗಡಿಗೆಸ್ತುತಿಸುತಕಡಲಶೈನನ ಕೊಂಡಾಡುತಲಿ ॥ ವಡಿಯಕೃಷ್ಣನುಅವನದೃಢದಭಕ್ತಿಗೆ ಮೆಚ್ಚಿ । ವಿಡುಬಿಡುಯನುತಲಿಪಿಡಿದುಅಪ್ಪಿದನು ॥ ೧ ॥ ಕ್ಷೇಮವೇನಯ್ಯಾ ನಿನ್ನ ಪ್ರೇಮದ ಸತಿಯಳು ಕ್ಷೇಮವೇನ-ಯ್ಯಾನಿನ್ನ ಸುತರೆಲ್ಲಾ ॥ ಕಾಮಪಿತಗೆಸುದಾಮನುನುಡಿದನು ಕ್ಷೇಮವೆಲ್ಲಾನಿಮ್ಮದಯದಿಂದಲಿ ॥ ೨ ॥ ದೂರಿಂದಬಂದಿರುಣ್ಣೀರಿನೀವೆಂದಾಗಪಾರ್ವನಭೋಜನಕ್ಕೆಬ್ಬಿಸುತಾ॥ ಕ್ಷೀರಸಾಗರವಾಶ್ಯಾಪಾರ್ವನ ಕರದೊಯಿದು ಚ್ಯಾರುಮಣಿಯ

ಮೇಲೆಕುಳ್ಳಿರಿಸಿ ॥ ೩ ॥ ನಾನಾಪ್ರಕಾರಪಕ್ವಾನ್ನದಡಿಗಿಯ
ನುರುಕ್ಮಿಣೀತಂದುಳಗಬಡಿಸುತಲೆ ॥ ದಾನವಾಂತಕಮಿತ್ರ
ಆನಂದದಿಂದಲಿಪಾನಮಾಡಿಬೇಸೊತ್ತಾನು ॥ ೪ ॥ ಅಡಿಕಿ
ವೀಳ್ಯಾವು ತಂದುಮಡಚಿಕೊಡಲಿಕ್ಕಾಗನುಡದಸುದಾಮತಾ
ಮನಸಿನಲ್ಲಿ ॥ ಬಡತನಪೋದಿತುಕಡುತವಕದಿಂದಲಿ ।
ಪಡಿಯಬಂಕನಾಥನಸಖನಿಂದಾ ॥ ೫ ॥

ಪದಾ ೧೮.

ಸೃಷ್ಟಿಕರ್ತನಪಿತನುಇಷ್ಟುಉಪಚ್ಯಾರವನುಇಷ್ಟಮಿತ್ರ
ಗೆಮಾಡುವಷ್ಟರೊಳು ಸೂರ್ಯನು ನೆಟ್ಟನೆ ಪಡುವಲಾಬಿಟ್ಟ
ವನುಇಳದುತಾಥಟ್ಟನೆಮುಳಗಿದನುಸ್ಪಷ್ಟವಾಗಿ ॥ ಶ್ರೇಷ್ಠ
ಪತಿಶಿಷ್ಯಳಿಗೆಶಿಟ್ಟು ಮಾಡಿವರಕಿಯಅಷ್ಟೆರಡಕಳೆಗುಂದಿ ನಷ್ಟ
ವಾದಂತ್ಯಾಗಧಿಟ್ಟರವಿಮುಳಗಲ್ಕೆ ಅಷ್ಟುಕಮಲಗಳೆಲ್ಲಾಷು
ಟ್ಯಾಗಿಮುಚ್ಚಿದವುಕಷ್ಟದಿಂದಾ ॥ ೧ ॥ ಚಿತ್ರಿಟ್ಟುಕೇಳಗಜ
ಕತ್ತಲಿಯು ಬಂದಾಗ ಮತ್ತ ಈಧರಿಗೆ ಬಹುಒತ್ತರದಿಂದಲಿ
ಮುತಿಗಿಯಹಾಕಲ್ಕೆಇತ್ತಜನರೆಲ್ಲಾರುಚಿತ್ತಜಾಮಾನನಾವ-
ತ್ರಿಸ್ತುತಿಸಿದರು ॥ ಉತ್ತಮಾಚಂದ್ರಮನುಮತ್ತಈಸ್ತುತಿ
ಕೇಳಿಸುತ್ತೆಂಟದಿಕ್ಕೆಲ್ಲಮುತ್ತಿದಕತ್ತಲೆಯ ವತ್ತಿಸರಸುದಕ್ಕೆ
ದಂಡೆತ್ತಿಮಾಡಣಗಿರಿಯನೆತ್ತಿಯಲಿ ಉದಯಾದವತ್ತರದಿಆಗ
॥ ೨ ॥ ಚಂದ್ರಉದಯಾಗಲ್ಕೆಬಂದಕತ್ತಲೆಯುಭಯದಿಂದ

ಓದಿತುಆಗಭಂದಾದಚಕೋರಮಂದಹಾಸ್ಯದಿ ನಗುತಇಂದು
ಕಿರಣವುಹರುಷದಿಂದಶೇವಿಸಿಆನಂದದಲಿನಲಿದು ॥ ಬಂದ
ಜ್ಯಾರಸ್ತ್ರಿಯರಿಂದು ಬೆಳಕಿಗೆ ಮನದಿನೊಂದುಈಚಂದ್ರಕಳೆ
ಗುಂದಿಹೋಗಲಿಯಂತೆಂದಶಬ್ದವುಕೇಳಿ ಇಂದುಇಲ್ಲಿರಬಾರ
ದೆಂದುತೆರಳಿದತನ್ನಮಂದಿರಕ್ಕೆ ॥ ೩ ॥ ಮೂಡಲವುಕೆಂಪ
ಸೆಯಿತೀಡಿದವುತಂಘಾಳಿಬಾಡುತಿರ್ದವು ಕುಮುದಗಾಢನೆ ಕ
ಣ್ತ್ತಿರದುನೋಡುತಿರ್ದವುಕಮಲಓಡಿದವು ತಾರೆಗಳುಮೂಡ
ಣಾದ್ರಿಯುಮೇಲೆಮೂಡಿದನುಸೂರ್ಯ ॥ ಕೊಡಗಲ್ಲವು
ಯೇರಿ ಪ್ರೌಢಸೂರ್ಯನು ನಿಂತುನೋಡಿದನು ಧರಿಯನ್ನು
ಪಾಡಿದರು ಸುರರಾಗನೋಡಿದಿನಮಣಿಯನ್ನು ರೂಢಿಯೊಳು
ಜನರೆಲ್ಲಕೂಡಿತನ್ನ ತನ್ನ ಕಾರ್ಯವಮಾಡುತಿಹರು ॥ ೪ ॥
ಹರಿಯುಉದಯಂಗೈಯ್ಯಹರಿಬಳಿಗೆಸುದಾಮತ್ವರದಿಬರುವ-
ದುನೋಡಿ ಮುರವೈರಿತಾಯದ್ದುವರಸಿಂಹಾಸನವನ್ನು ತರಿಸಿ
ಆದರಲ್ಲಿದ್ವಿಜನಹರುಷದಿಂದಲ್ಲಿಕುಳ್ಳಿರಿಸಿದಾನು ॥ ಸರಸಾದ
ಈಕಥಿಯುನುರಸಿಕರುಕೇಳಿದರೆ ದುರಿತದೂರಾಗುವದು ಸರಿ
ಯುವದುಬಡತನವು ವರಬಂಕನಾಥನಾಕರುಣದಿಂದಲಿ ಈಗ
ತ್ವರಿತದಲಿಮುಗದುವಿಲ್ಲೆರಡುಆಧ್ಯಾಯಾ ॥ ೫ ॥

# ೩ ನೇ ಅಧ್ಯಾಯ.



ತಾಳ— ಬಿಲಂದಿ.

ಮಡದಿಯರಬಳಗೆಹರಿನಡುವೆಕುಳತಿರಲಾಗ । ಯಡ ಬಲದಿಘಾಳಿಯನುಹೊಡಿಯುತ್ತಿರ್ದಾರರು ॥ ಕಡಲೊಡಿಯಾ ಕೇಳಿದನುಬಡಸುದಾಮನೆನಿನ್ನಾ ಮಡದಿಕಳುಹಿದಳೇನು ಕೊ ಡುಯನಗೆಈಕ್ಷಣದಿ ॥ ೧ ॥ ಅಂದಮಾತಿಗೆದ್ವಿಜನುಚಿಂದಿ ಚಿಂದಿಯೊಳಗೆಬಂಧಿಶಿದವಲಕ್ಕಿಯನುತಂದುಕೊಡಲಿಕ್ಕೆ ॥ ಮುಂದೆ ರುಕ್ಮಿಣಿನೋಡಿ ಮಂದಹಾಸ್ಯದಿನಗಲು ಮಂದಾ ರೋಧರಕ್ಕೆಸೊನ್ನೆಯಿಂದಜರಿದರೆಗೆ ॥ ೨ ॥ ಮುರರಿಪು ಅವಲಕ್ಕಿಯುಸತ್ವರದಿಭಕ್ಷಿಸುತಾಗ । ಹರುಷದಿಕೊಟ್ಟನು ತನ್ನ ಅರಸಿಯರಿಗೆಲ್ಲಾ ॥ ಸರ್ವಯಾದವಬಲವೃತರಿಸಿಕೊಟ್ಟ ನುಮುಂದೆ । ಕರಿಕಳಿಸಿದನಾಗವಿಶ್ವಕರ್ಮನನುಬೇಗ ॥೩॥ ಬಂದವಿಶ್ವಕರ್ಮಗೆಇಂದಿರೇಶನುನುಡದಾ । ಇಂದುನೀ ಪೋಗಯ್ಯಾಸುಂದರಪುರಕ್ಕೆ । ಛಂದಾದನನ್ನದ್ವಾರಕಾ ಕಿಂದಧಿಕಮಾಡುಯಂತೆಂದು ಬಂಕನಾಥನಸಖಅಂದಹರುಷ ದಲಿ ॥ ೪ ॥

## ಪದ್ಯ ೨೦.

ಹರಿಯ ಮಾತವು ವಿಶ್ವಕರ್ಮನು ತಾ ಕೇಳಿ ತ್ವರಿತದಲಿ ಸುಂದರಾಪುರಕೆಬೇಗನೆಪೋಗಿಯರಡನೆದ್ವಾರಕದಪರಿಯವಿಸ್ತೀರ್ಣದಿಂವಿರಚಿಸಿದಪಟ್ಟಣವುಸರಸವಾಗಿ ॥ ಪುರವುನಿರ್ಮಿಶಿಬೇಗಹರಿಯಚರಣಕ್ಕೆ ಬಂದುಯರಿಗಿ ಹೇಳಿದನಾಗಸರ್ವವಿಸ್ತರವೆಲ್ಲಸರಸಿಜಾಂಬಕಕೇಳಿತರಿಸಿವೀಳ್ಯವುಕೊಟ್ಟುಹರುಷದಿಪೋಗೆಂದುಹರಸಿಕಳುಹಿದನು ॥ ೧ ॥ ಸೃಷ್ಟಿಕರ್ತನಪಿತನುಇಷ್ಟವಮಾಡಿದಮಹಿಮಇಷ್ಟಮಿತ್ರರಿಗೆವಂದಿಷ್ಟುತಿಳಿಯದೆಇರಲುಪಟ್ಟದರಸಿಯು ಆಗ ಥಟ್ಟನೆತಾಯದ್ದು ಕೃಷ್ಣರಾಯನಕರವುಘಟ್ಯಾಗಿಪಿಡಿದು ॥ ಮುಷ್ಟಿವಂದಕೆನೀನುಕೊಟ್ಟೆಇಂಥಾಉತ್ಕೃಷ್ಟಭಾಗ್ಯವುಎರಡನೆಮುಷ್ಟಿಯನುವೆದ್ದರೆಕೊಟ್ಟೆಯೊಯನೆಂದುಘಟ್ಯಾಗಿಪಿಡಿಯಲ್ಕೆಥಟ್ಟಶಿದ ಕೃಷ್ಣನಿನಗಿಷ್ಟರಾಗೊಡವಿಯಾಕೆಂದುಆಗ ॥ ೨ ॥ ಫುಲ್ಲನಾಭನುಕೊಟ್ಟಸಲ್ಲಲಿತಆವಲಕ್ಕೆಎಲ್ಲವಾರಬಲವುಬಹು ಆಲ್ಹಾದದಿಂದಲ್ಲಿಮೆಲ್ಲಿತಿಂತೆಂದಾರುಬಲ್ಲಿದಳು ಸುದಾಮನೊಲ್ಲಭಿಯಸರಿಯುಯಾರಿಲ್ಲಯಂದು ॥ ಗೊಲ್ಲರೊಡಿಯನುವೆದ್ದುಉಲ್ಹಾಸದಿಂತನ್ನವಲ್ಲಭಿಯ ರುಕ್ಮಿಣಿಯ ಮೆಲ್ಲನೆಕರದಂದಫುಲ್ಲಜಾಕ್ಷಿಯನೀನುನಿಲ್ಲದೆಆಡಿಗಿತಡವಿಲ್ಲದೆತಯಾರಯಲ್ಲಮಾಡೆಂದಾ ॥ ೩ ॥

**ಪದ ೨೧.**

ರಾಗ— ಕಾಂಬೋದಿ ತಾಳ ಆದಿ.,

ದಾನವಾಂತಕದ್ವಿಜನಕೂಡಿಸ್ನಾನಾವಾಡಿಬೇಗದಿಂದ ಲಿ । ಪಾನಮಾಡುವಶಾಲಿಗೇನಡದಾರಾನಂದದಿಂದಾ ॥ ಮಾನಿನಿಯರುಆಗಪುದ್ದಾನೆಯಂತೆನಡೆಯುತಲಿಪೀನಮೆಂ ಟಿಕೆಕಾಲುಂಗರಪೈಜಾಣಾವುನುಡಸುತಲೆ ॥ ೧ ॥ ಚಿನ್ನದಹರಿ ವಾಣಾವುಬಟ್ಟಲಚನ್ನಕದಳಿಯಲಿಯಮೇಲೆ । ಮುನ್ನತಂದಿ ಟ್ಟಾರುಅವರಿಗೆರನ್ನೇರುಆಗ ॥ ಅನ್ನಾಸಾರುಪಳದೆಮತ್ತ ವೆಂಣಿಚೂರಿಗೆಬೀಸೂರಿಗೆಕಲಸನ್ನಬುತ್ತಿಯುಪರಿಪರಿಯ ಪರ ಮನ್ನಹೋಳಿಗಿಯಾ ॥ ೨ ॥ ಮಂಡಿಗೆ ಗುಳ್ಳೋರಿಗೆಯುಸಂ ಡಿಗೆಹಪ್ಪಳವುಬುಂದೆ । ದುಂಡಿಬರ್ಫಿಯನು ತೆಗೆದುಕೊಂಡು ಹಾಕಿದರು ॥ ಪುಂಡರಿಕಾಕ್ಷಗೆದ್ವಿಜಗೆದುಂಡಕುಚದಬಲಿಯ ರುಗೋಪ್ರ । ಹಿಂಡಿಹಾಲುಬಡಿಸಿದರಾಗಥಂಡಥಂಡದಲಿ ॥೩॥ ಬೆಲ್ಲವಂತರಕಾಯಿರಸವುಎಲ್ಲಿಉಪ್ಪುಕಾಯಿಗಳನಾ । ನೆಲ್ಲಿಮಾಗಣಿಬೇರುತಂದಾರಲ್ಹಾದದಿಂದಾ ॥ ನಿಲ್ಲದೆಶಾಖ ವುತಡವುಯಿಲ್ಲದೆತುಪ್ಪವುತಂದು । ಉಲ್ಹಾಸದಿಂಹಾಕಿದರು ನಲ್ಲೇರು ಆಗ ॥ ೪ ॥ ಕೋಸಂಬರಿಜೀನಸುಗಳನುಶಾಶಿವಿ ಗಾಯಿಮೆಣಸುಪುಡಿನಾ । ನೇನುಹೇಳಲಿಬಡಿಸುತ್ತಿಹರು ಆ ಶಶಿವದನಿಯರು ॥ ಈಶಬಂಕನಾಥಸಖನು ಆ ಸುದಾಮನು ಈರ್ವರುಅತಿಸಂತೋಷದಿಂಮಾತಾಡುತ್ತಿಹರು ಆ ಸಮಯ ದಲ್ಲಿ ॥ ೫ ॥

ಪದ್ಯ ೨೨.

ವನಜನಾಭನುಆಗಮುನಶಿನೊಳುಹಿಗ್ಗಿ ಹಿಂದಿನವಾತು ವಂದಾಗನೆನಪಾಗಿಪೇಳಿದನು ಘನಗುರುವ ಸಂಧಿಪನ ಮುನಿ ಯಲ್ಲಿಬರಿಯುವಾಗೊಂದಿನಕಟ್ಟಿಗೆಯತರ್ರಿಎನಲು ಗುರುನ ಮಗ ॥ ವನಕೆಪೋಗಿರ್ವರುವನವನವಸಂಚರಿಸಿವನದಲಿ ಕಟ್ಟಿಗೆಯನುತರುವ ಸಮುಯದಿ ಅನಿತರೊಳುಬೇಗನೆದಿನಮು ಣಿಯುಪಡುವಲವನಧಿಗಿಳಿಯಲುಮುಂದೆಘನಮೇಘತೋ ರಿ ॥ ೧ ॥ ಘುಡುಘುಡಿಸುತಲಿಆಗ್ಗೆಶಿಡಲುಮಿಂಚಬ್ಬರಣಿ ಖಡಖಡಲಖಡಲೆಂದುಬಿಡದೆಬೆಳತನಕ್ಕಿಂಗೆ ಹೊಡಿಯುತಿರೆ ನಾವಾಗನಡುಗಿಹಲ್ಲಿಗಟಗಿರಿದು ಅಡವಿಯಲಿ ವಂದುಮಹಾ ಗಿಡವುಕಂಡು॥ ಅಡಿಗಿಕೊಂಡೆವ್ರುಯಿತ್ತಗಡಬಡಿಸಿಸಂದೀಪನ ಮಡದಿಆಾದಳುಹೀಗೆಅಡಿವಿಗೆಹೋದಂಥಾ ಹುಡುಗರು ಬರ ಲಿಲ್ಲ ತಡವಾದಿತೆನಲಿಕ್ಕೆ ಮಿಡಕಿಸಂದೀಪನಾಗನುಡದನ್ಹೀಗೆ ॥ ೨ ॥

ಪದ ೨೩

ಮೋಹನಕಲ್ಯಾಣಿ ಆದಿತಾಳಾ.

ಪ್ರೀತಿ ಬಾಲಕರಿನ್ನುಬರಲಿಲ್ಲಾ ॥ ಆಯ್ಯೋ ॥ ರಾತ್ರಿ ಭಾಳಾದಿತುಯಾತರಸಲುವಾಗಿ ॥ ಪಲ್ಲ ॥ ಕಂದರಿಬ್ಬರುಬ ರಲಿಲ್ಲೆಂದು । ಆವರತಂದಿತಾಯಿಯುಕೇಳಿದರಿಂದು । ಆವ ರಮುಂದಉಸರುವೆನಾಏನೆಂದು ॥ ಮಂದಮತೆಯುನಾನು

ಇಂದ್ಯಾಕಕಳುಹಿದೆ ॥ ೧ ॥ ಕಟ್ಟಗೆತರಲಿಕ್ಕೆನಮ್ಮನ್ನು । ಇಂದದುಷ್ಟಗುರುವವಾಕೆಕಳುಹಿದನು । ಎಂಬಸಿಟ್ಟನಿಂಡಲಿ ಬಾರರುವಿನು । ಬೆಟ್ಟದೊಳಗದಾರಿಥಟ್ಟನೆಶಿಗಲಿಲ್ಲೆಂದು॥ ೨॥ ಅರಣ್ಯದೊಳಗಿರುವರೇನು । ನಡುದಾರಿಯೊಳಗಬರುತಿರ್ದಾರೇನು । ಅಥವಾಊರವಳಗಬಂಧಿಹರೇನು ॥ ಚಾರುಬಂಕೇಶನು ಘೋರಹಾಕಿದಯನಗೆ ॥ ೩ ॥

ಪದ ೨೪.

ರಾಗ—ನಿಲಾಂಬರಿ ಅಷ್ಟತಾಳ.

ಎತ್ತಪೋದರೆತ್ತಹುಡಕಲಿ । ಬಾಲಕರುಇಲ್ಲ । ವತ್ತಇರುವರುಯತ್ತಪೋಗಲಿ ॥ ಯತ್ತಪೋದರುಹೊತ್ತುಆಯಿತುವುತ್ತಯನ್ನಾಚಿತ್ತನಿಲ್ಲದು । ಅತ್ತುಕಣ್ಣುಹತ್ತಿಕಾಳಾಗಿಸುತ್ತಮುತ್ತಲೆಕತ್ತಲೆಕಾಣುದು ॥ ಪಲ್ಲ ॥ ಕರಡಿಪಿಡಿದುಮುರಿದುಬಿಟ್ಟತೆ । ಆ ಪುತ್ರರನ್ನು । ಉರಗಕಡಿದುಹರಿದುಪೋದಿತೆ ॥ ಹರಿಯುವಂಥಾಹರಿಯವಳಗಹರಿದುಹೋದರೊತರುಳರಿಂದ । ದುರುಳಚೋರರುಬಡಿದರೊಮರತುಹ್ಯಾಂಗೆಇರಲಿನಾನು ॥ ೧ ॥ ಶಿಡಿಲುಯರಿಗಿಬಡಿದುಕೊಂದಿತೆ । ಅಕಟಕಟಾಹರನೆ । ಬಿಡದೆಸಿಂಹಹೊಡಿದುತಿಂದಿತೆ ॥ ಅಡಿವಿವಳಗೆಗಿಡವನೇರಿಬಿಡದೆಕಟ್ಟಿಗಿಕಡಿಯುತ್ತಿರಲು । ಗಿಡವುಮುರಿದುಬುಡಕಬಿದ್ದುಹುಡುಗರಿಂದವುಡದರೇನು ॥ ೨ ॥ ಬಾರಿಬಾರಿಗೆಮೂರ್ಛೆಆಗುತಲಿ । ಬಿದ್ದನುಖಬರ । ಹಾರಿ

ಆಗಧಾರುಣೀಯಲಿ ॥ ದಾರುಇದನಪಾರವಾಡುರುವೀರಿ ಬಂದಘೋರಚಿಂತಿ । ಚ್ಯಾರುಬಂಕನಾಥನಹೊರತುದೂರ ಮಾಡುವರ್‍ಯಾರುಇಲ್ಲ. ॥ ೩ ॥

ಪದ್ಯ ೨೫.

ಎ೯ದುಸಂಧಿಪಗುರುವುನೊಂದುಮನಶಿನವಳಗೆಮುಂ ಡೇನುಮಾಡುತಿಂತೆಂದುಹಂಬಲಿಸುತಲಿಬಂದು ಆ ವನದಲ್ಲಿ ವಂದುಸ್ಥಳಬಿಡದೆದೃಷ್ಟಿಂದನಾಲ್ಕುದಿಕ್ಕಭೆಂದಾಗಿನೋಡಿ ॥ ವಂದುಮಹಾವೃಕ್ಷದಾಸಂದಿಯೊಳುನಾವುಚಿಂತಿಂದ ಕೂತ ದ್ದು ದೂರಿಂದ ನೋಡುತ ಗುರುವಮ೯ದಹಾಸ್ಯದಿನಗುತ ಬಂದು ಬಿಗದಪ್ಪಿ ಆನಂದದಲಿ ನುಡದ ನಮ್ಮುಂದೆ ಈ ಪರಿಯು ॥ ೧ ॥

ಪದಾ ೨೬.

ತಾಳ—ಆದಿ.

ಕಂದಗಳಿರ್‍ಯಾನೀವುಬರಲಿಲ್ಲೆಂದು । ಬಂದೆನಿಲ್ಲದೆಮನವು ॥ ಕಂದಗಳಿರ್‍ಯಾನೀವುಇಂದಿನಾರಾತ್ರಿಯೊಳುವಂದು ಭಯವಿಲ್ಲ ದ್ದಿಂಥಾಸಂಧಿಯೊಳುಕುಳತಿರಿ ॥ ಪಲ್ಲ ॥ ಮನಿಯೊಳುನು ಡದಿಯಳು । ನಿಮ್ಮೀರ್ವರಾ । ನೆನಿಸಿಬಳಲುತ್ತಿಹಳು ॥ ವನಕೆ ಕಳುಹಿದಿರೆಂದು ಮನಶಿಗೆ ಬಂಧಾಂಗೆ ಧ್ವನಿ ಮಾಡಿಬ ಯ್ಯುವಳುಉಣಾದೆನಿನ್ನಿನರಾತ್ರಿ ॥೧॥ ಕೇರಿಕೇರಿಯನೋಡಿ । ನಾಬಂದೇನು । ದಾರಿಯೋಳ್‌ಹುಡಕ್ಯಾಡಿ ॥ ಮೀರಿದಾಚಿಂ

ತಿಲೆಘೋರಅರಣ್ಯವನು । ಶೇರಿಬಂದೇನು ಖಬರಹಾರಿತಿರಿ ಗ್ಯಾಡುತಲೆ ॥ ೨ ॥ ಅಡಿಗಡಿಗೆಬೀಳುತಲಿನಾವನದೊಳು । ನಡದುಬಂದೆನುಯಿಲ್ಲಿ ॥ ವಡಿಯಬಂಕೇಶನಾಅಡಿಯಸ್ಮರಿಸಿ ದರಿಂದ । ತಡವುಇಲ್ಲದೆನಿಮ್ಮನ್ನುಡಿಕಿಕೊಟ್ಟ್ಯಾನುಅವನೆ ।೩।

ಪದ ೨೭.

ಇಷ್ಟುಗುರುಪೇಳುತಿರೆ ಥಟ್ಟನೆನಾವೆದ್ದು ಧಿಟ್ಟಗುರುವಿನಪದವುಮುಟ್ಟನಮಸ್ಕರಿಸಲ್ಕೆ ಶ್ರೇಷ್ಠಪುತ್ರರೆನಿಮಗೆಕಟ್ಟಿಗಿಯಸಲುವಾಗಿಕಷ್ಟವಾಯಿತೆಂದುಮುದ್ದಿಟ್ಟನಾಗ ॥ ಕೆಟ್ಟ ವಸ್ತ್ರಗಳನುಬಿಟ್ಟುಕೊಡರೆಂದು ತನ್ನ ಬಟ್ಟೆಗಳತೆಗದಾಗಕೊಟ್ಟುಹೊಚ್ಚಲ್ಕೆಗದಗುಟ್ಟನಡಗುವಥಂಡಿಬಿಟ್ಟುಓಡಿತುಆಗಧಿಟ್ಟನೆನಡಿರೆಂದುಬೆಟ್ಟಬಿಟ್ಟು ॥ ೧ ॥ ಗುರುವಿನೊಚನವುಕೇಳಿ ಹರುಷದಿಂದಲಿನಾವುತೆರಳಿಬೇಗನೆಬಂದು ಅರಮನೆಯಹೋಗುತಿರೆಹೊರಗೆ ಸಂದೀಪನಾಅರಸಿಯನುಕಂಡಾಗಚರಣಕ್ಕೆ ಸಾಷ್ಟಾಂಗಯರಿಗಿದೆವುನಾವು ॥ ತ್ವರದಿಂದಗುರುಪತ್ನಿ ಕರದಿಂದಬಿಗಿದಪ್ಪಿಸುರಗಿದಳುಕಂಣೀರುವರ ಸುದಾಮನೆನಿನಗೆ ಅರುಹಿದೆನುಇದನೆಲ್ಲತರುಳದಲಿ ಆಟಮುರತಿದೋಏನೆಂದು ಹರಿಯುನುಡದಾ ॥ ೨ ॥ ಗೊತ್ತಎನಗುಂಟಹರಿಯೆಉತ್ತಮಾಗುರುವಿನಲಿ ಮತ್ತನಿಗಮಾಗಮುವುವತ್ತರದಿನಾವುಕಲಿಯುತ್ತಇರುತಿರೆಆಪತ್ತು ಗುರುವಿಗೆಬಂತುಸತ್ತಆತನಪ್ರೀತಿಪುತ್ರನಾಗ ॥ ಉತ್ತಮಾಗುರುವಿನಾ ಹತ್ತರಕೆನೀಪೋಗಿ

ಮುತ್ತಗುರುದಕ್ಷಿಣೆಯುವತ್ತರದಿ ಬೇಡೆನಲುಸತ್ತಂಥಾಪ್ರೀತಿ
ಯಾಪುತ್ರನಾಪಡಿಯಂದಸತ್ಯದಿನೀಅವನಮುತ್ತಜೀವಿಶಿದಿ।೩।
ಈರ್ವರೂಟವುತೀರಿಸಿದ್ದರುಆಗನಾರಿಯರು ತಂದುಕೊಟ್ಟ
ರುಅಡಿಕೆಯುವೀಳ್ಯಪಾರ್ವಗೆವಸ್ತ್ರಅನಿವಾರವನು ಕೊಟ್ಟುಸ
ತ್ಕರವಮಾಡಿದನಾಗಗೌರಿಕೇಳು ॥ ಊರ್ವಿಯೊಳುಈಕಥಿಯ
ಸಾರವನುಕೇಳಿದವರಘೋರದುಃಖವು ಪರಿಹಾರವಾಗುವದ
ಲ್ಲಾಚ್ಯಾರುಬಂಕನಾಥನಾಪೂರದಯದಿಂದ ಸಂಪೂರ್ಣವಾ
ದವುಈಗಮೂರುಅಧ್ಯಾಯಾ ॥ ೪ ॥

---

## ಅದ್ಯಾಯು ೪ ನೇಯುದು.

ಪದಾ ೨೮.

ರಾಗಭೈರವಿ ಅಡತಾಳ

ಏಳುದಿವಸೆ ಸುದಾಮುನಿರ್ದಭಾಳಸುಖದಲಿ । ನೀಲ
ಮೇಘಶಾಮಲನಾಆಲಯಾದ ॥ ೧ ॥ ಮುಂದಭೂಸುರ
ನಾಗಯೋಚಿಸಿಅಂದ ಮನದಲಿ । ಬಂದುಬಹಳದಿವಸವಾ
ಯಿತೆಂದೆಂಬುತಲಿ॥ ೨ ॥ ಮಾನಿನಿಯುಮನಿಯವಳಗೆಏನು
ಚಿಂತಿಪಳೊ । ಧಾನ್ಯಯಿದ್ದಿಲ್ಲಸೂನುಗಳಿಗೆಏನುಹಾಕಿದ
ಳೊ ॥ ೩ ॥ ಬೇಗದಿಂದಾಗೃಹಕೆನಾನುಹೋಗಬೇಕೆಂದು ।
ನಾಗಶೈನಇದ್ದಬಳಿಗೆಸಾಗಿತಾಬಂದು ॥ ೪ ॥ ಕೇಳುಕೃ
ಷ್ಣಾಬಂದುಆಯಿತುಬಹಳದಿವಸವು । ಕಾಳಇದ್ದಿಲ್ಲಮನಿಯು

ವಳಗಹೇಳಲೊಲ್ಲೆವು ॥ ೫ ॥ ಮುರಲಿಧರನುದ್ವಿಜನಮಾತಿ ಗೆಭರದಿನುಡದನು । ಹರುಷದಿಂದಹೋಗಿರೆಂದುಕರವಮು ಗದನು ॥ ೬ ॥ ಹರಿಯಅಪ್ಪಣಿತೆಗೆದುಕೊಂಡುಅರಮನಿ ಯೊಳಗೆ । ತ್ವರದಿಹೋಗಿಹೇಳಿದಾಗಅರಸಿಯರಿಗೆ ॥ ೭ ॥ ಸರ್ವರಿಗೆಹೇಳಿನಡದಪುರವದಾಟುತಲಿ । ಮರಗಿಮನದಿ ಬಂಕನಾಥನಸ್ಮರಣಿಮಾಡುತಲಿ ॥ ೮ ॥

ಪದಾ ೨೯.

ರಾಗ—ನೀಲಾಂಬರಿ ತಾಳ ಬಿಲಂದಿ.

ಎಲ್ಲಿಪೋಗಲಿನಾಇನ್ನೆಲ್ಲಿರಲಿಅಕಟಕಟಾ ॥ ಎಲ್ಲಿ ಪೋದರುಎನಗೆಎಲ್ಲ್ಯಾಸುಖವಿಲ್ಲಾ ॥ ಪಲ್ಲ ॥ ಮಂದಾ ರೋಧರನಬಳಿಯಿಂದತಂದಿರೆಯೇನು । ಎಂದು ಕೇಳಿದರೆ ನ್ನಾಕಂದಗಳುಅವರಾ । ಮುಂದಲುಸರುವೆನಾಇನ್ನೇನೆಂದು ಅಕಟಕಟಾ ॥ ಹಿಂದಿನಜನ್ಮದಿನಾಬಡಮುಂದಿಯಬಗದಿಲ್ಲೇ ನು ॥ ೧ ॥ ಅನ್ನಾಕಾಣದೆಬಹಳಬನ್ನಬಡುತಲಿನಾನು ॥ ಪನ್ನಗಶಯನನುಯನ್ನಘುನ್ನಗಳೆಯನು । ಮನ್ನಿಶಿಪಿನಾ ದರುಹೊನ್ನಕೊಡುವನುಯೆಂದು ॥ ಚನ್ನಾಗಿಬಂದರೆವಿಧಿಬೆ ನ್ನಬಿಡಲಿಲ್ಲಾ ॥ ೨ ॥ ಊರಿಗೆಹೋಗಿಇಂಥಾದಾರಿದ್ರದಲಿ ಸಂ । ಸಾರಾಮಾಡುವಕಿಂತಾಘೋರವಾದಂಥಾ । ಅರ ಣ್ಯಾದೊಳಗೆನಾಸೇರಿಜನ್ಮಾಂತರವು ॥ ಚಾರುಬಂಕನಾಥನಪ ದವಾರಿಜನೆಂಬುದೆಸುಖವು ॥ ೩ ॥

### ಪದಾ ೩೦.

ಈರೀತಿಶೋಕಅನಿವಾರವಮಾಡುತಲಿಹರದಾರಿಅಳತ್ರಿಗೆ
ಬರಲುದ್ವಾರಕಾಪುರದಿಂದ ದ್ವಾರಪಾಲಕನೊಬ್ಬ ಸಾರಿಕೂ
ಗುತಬಂದಪಾರ್ವನೆನಿಲ್ಲೆಂದುದಾರಿಹಿಡಿದು ವಾರಿಜಾಂಬಕನಿ
ಮಗೆಪೂರ್ವದಲಿಕೊಟ್ಟು ಸತ್ಕಾರವಮಾಡಿದ ವಸ್ತ್ರಪೂರಇಸ
ಕೊಂಡುಲಗುಬಾರೆಂದುನೀನುಇದರವಿೀರಿಕೊಡದಿರೆಹಿಡಿದು
ಜೋರಿಂದಲಾದರುತಾರೆಂದುನುಡದಾ ॥ ೧ ॥ ಕೊಡದಲೆ
ನೀಈಗತಡವುಮಾಡಿದರೆನ್ನವಡಿಯಕೃಷ್ಣನು ಕೋಪತಡಿಯು
ದೆಯುನ್ನನ್ನುಜಡಿದುನುಡಿಯುುವನು ಬಹುಕೆಡಕಶಬ್ದವುಕೇ
ಳುಕೊಡುಯುನಗೆವಸ್ತ್ರವುತಡವುಬೇಡಾ ॥ ಬಡವ ಸುದಾಮ
ನುದೂತನುಡಿದವಾಕ್ಯವುಕೇಳಿಕಡುನೊಂದುಮನಶಿನಲಿಮಿಡಿ
ಕಿಉಸರವುಆಗಬಿಡುತಕೊಟ್ಟನುವಸ್ತ್ರನಡದಅತಿ ಮರಗುತಲಿ
ನುಡದಮನದಲಿಹೀಗೆಮಡದಿಕೇಳು ॥ ೨ ॥

### ಪದಾ ೩೧.

ರಾಗ — ಕೇತಾರಗೌಳಿ ರೂಪತಾಳ.

ಅಯ್ಯೋಶಿವನೆಎಂಥಾದಾದಿತುದೈವಾ ॥ ಯನ್ನಮೈ
ಯ್ಯಮೇಲಿಂದುಸುದ್ದಾಹೋತುಮಹಾದೇವಾ ॥ ಪಲ್ಲ ॥
ವಾರಜನಕಕೊಟ್ಟವಸ್ತ್ರದಿಂನಾನು । ಮೂರಾರತ್ರಿಂಗಳಹಾ
ರಮಾಡುವೆನು ॥ ಎಂಬಧೈರ್ಯಇದ್ದದ್ದುಹೋಯಿತುಮಾ
ಡಲಿನ್ನೇನು ॥ ೧ ॥ ಯತ್ತಹೋದರುವಿಧಿಯನ್ನಬೆನ್ನವನು ।

ಹತ್ತಿಬರುತ್ತದೆಮಾಡಲಿನ್ನೇನು ॥ ಬೇಗನ್ಮೃತ್ಯುದೇವತೆಬಂದುನಯ್ಯುಬಾರದೇನು ॥ ೨ ॥ ದೋಷವುಹಿಂದಿಂದುಬಂದುತಟ್ಟೀತು । ಆಶಕ್ಕೆಬಂದದ್ದುನಿರಾಶವಾಯಿತು ॥ ಸರ್ವೇಶಬಂಕೇಶನದಯವುತಪ್ಪೀತು ॥ ೩ ॥

ಪದಾ ೩೨.

ಪರಿಪರಿಯಚಿಂತಿಂದ ಮರುಗಿ ಮನಶಿನಒಳಗೆಕರಗಿ ಹಂಬಲಿಸುತಲಿಮರತುದೇಹದಮೇಲೆಸ್ಮರಣಾಯಿಲ್ಲದೆ ಅವನುತ್ವರಮಾಡಿಸುಂದಾರಪುರಕೆಸುದಾಮನುಬರುತಿರ್ದನು ॥ ಮುರವೈರಿಸಖನಾಗಬರುತತನ್ನ ಸುಂದರಾಪುರವು ನೋಡುತಲ್ಯಾಗಲರಿಯದಲೆಹೀಗಂದಮರತುನಾದಾರಿಯಸುತಿರಗಿದ್ವಾರಕಾಕೀಗಹೊರಳಿಬಂದೆನುಯಂದುಚೆರಗಾದನಾಗ ॥ ೧ ॥

ಪದಾ ೩೩.

ರಾಗ—ಯುಕಲಕಾಂಬೋದಿ ಅಷ್ಟತಾಳ.

ಆರಪುರವ್ಹೊಯಿದನಾದಾರುಪಾಲಿಸುವರು ॥ ದ್ವಾರಕಾಪುರವೆಂದರೆನೀರುಸುತ್ತಲೆಇಲ್ಲಾ ॥ ಪಲ್ಲ ॥ ದಾರಿಲ್ಹೋಗವರಿಗೆಪಾರ್ಥಕೇಳಿದಹೀಂಗೆ । ದಾರುಈಪುರಕ್ಕೆಧಿಕಾರವಾಗಿಹರಿಸಲು । ದಾರಿಗರೆಲ್ಲಾಕೇಳಿಸಾರಿನುಡದರುಆವಗ ॥ ಚಾರುಸುದಾಮನುಈಊರಿಗೆಧೊರಿಯನಲು । ಈರೀತಿನುಡಿಕೇಳಿಪಾರ್ವಬೈಯ್ಯುತವರನ್ನು ॥ ದಾರಿದ್ರನೆಂಬುನ

ಗಚ್ಯಾರಿಕ್ಯಾಡುವರಯ್ಯೊ ॥ ೧ ॥ ಮುಂದಕ್ಕೆಗೋವುಗಳ ವೃಂದವನುಕಾಣುತಲಿ । ಬಂದುಕೇಳಿದದಾರುವೆಂದುಭೂ ಸುರನಾಗ । ಅಂದವಾತಿಗೆಕಾಯುಕಂದಗಳುಪೇಳಿದರು ॥ ಸುಂದರಾಪುರದಅರಸುಛಂದಸುದಾಮನವು । ಎಂದುನುಡ ದಡ್ಡುಕೇಳಿಲಿಂದಈಪರಿವಾತು ॥ ಚಿಂದಿಹೊತ್ತದ್ದಕ್ಕೆಚ ಕ್ಕಂದನಾಡುವರಿವರು ॥ ೨ ॥ ಎತ್ತೊಂಟಸಾಲಗಳುಜತ್ತಾ ಗ್ಯಾಡೂದುನೋಡಿ । ವತ್ತರದಿಅವುಗಳಹತ್ತರಹೋಗಿಬೆನ್ನೆ । ಹತ್ತಿಕಾಯುವರನ್ನುವತ್ತಕೇಳಿದಹೀಂಗಿ ॥ ಸತ್ಯದಿಪೇಳಿರೆ ನವುತ್ತನುಡದಕ್ಕೆಅವರು । ಚಿತ್ತಜಾಪಿತನಸಖಾಉತ್ತಮಸು ದಾಮನುವು ॥ ವತ್ತೀರೀತಿಕೇಳಿಬೈವುತ್ತನಡದನುಮುಂದೆ ॥ ೩ ॥ ಕರಿಯಹಿಂಡವುಮತ್ತತುರಗಸಮುಹವುಕಂಡು ॥ ತ್ವರೆವಾಡಿಬಂದುಅಲ್ಲಿಇರುವರಿಗೆಂದಾನ್ಹೀಗೆ । ಸರ್ವಹಿಂ ಡವುಯಾವಅರಸನುವೆನಲಿಕ್ಕೆ ॥ ಧೊರಿಸುದಾಮನುವೆಂದು ಭರದಿನುಡಿದದ್ದುಕೇಳಿ । ವರಬಂಕನಾಥನೆಈಪಾಮರಮಂ ದಿಬಾಯಿಲಿಇಂಥಾ ॥ ಪರಿಯಅನಸೂದುನಿನಗೆಸರಿಬಂತೆಅಂ ತನಡದಾ ॥ ೪ ॥

ಪದಾ ೩೪.

ಆಗವಿಸ್ಮಿತನಾಗಿಮೂಗಿನಲಿಬೆರಳಿಟ್ಟುಹಿಂಗೆಇವರೆಲ್ಲಾ ನನ್ನವೇಗಹೇಳುವದ್ಯಾರೆ ಈಗಅತಿಮನೋಹರವಾಗಿತೋ ರುವಪುರಕೆಬೇಗದಿಂದಲಿನಾನುಹೋಗಬೇಕು ॥ ಹೀಗತಿಳ

ಕೊಂಡುತಾಸಾಗಿಬರುತಿರುದನ್ನು ಆಗಲಿಪ್ಪರಿಗೆಯಮೇಗಿಂ ದೀತನಸತಿಯುಬೇಗದಿಂದಲಿಕಂಡು ಈಗಪತಿಬಂದನೆಂದಾಗ ಉಪ್ಪರಿಗೆಯಮೇಗಿಂದಿಳದು ॥ ೧ ॥

**ಪದಾ ೩೫.**

ರಾಗ—ಸಾರಂಗ ಆದಿತಾಳ.

ತರಿಸಿದಳುಅಂದಣಾವುಕರಿಶಿದಳು ಜನರಾ । ನೆರಹಿದಳು ಕರಿಹಿಂಡುತುರಗರಥಸಹಿತಾ ॥ ಕರದೊಳಗಾರುತಿಹರುಷಾ ದಿಂದ್ಹಿಡಿದು । ಅರಸನಭೆಟ್ಟಿಗೆತ್ವರದಿನಡದಾಳು ॥ ೧ ॥ ಕುಟಲಕುಂತಳೆಯುತಾಪಟುತರುವಾದಾ । ನಟನರ್ತಕರ ನಾಸಂಘುಟಿಶಿದಳುಆಗ ॥ ಪಟಹಾಡಿಂಡಿಮುವ್ರುತಮ್ಮ ಟಬೇರಿ ಹೊಡಿಶಿ । ಭಟರಾಗಮುಂದಮುಂದಸರಿಸುತ್ತಲಿಹರು ॥ ೨॥ ಹಿಂದಮುಂದಕ್ಕೆನಾರಿವೃಂದೊಳುಕೂಡಿ । ನಂದನರಕರ ಕೊಂಡುಅಂದಣವನೇರಿ॥ ಬಂದುಪತಿಅಡಿಯಾಅರ್ಥಿಂದತೊ ಳಿಯುತಲಿ । ವಂದನೆಮಾಡಿದಳುಕಂದಗಳುಸಹಿತಾ ॥ ೩ ॥ ಬಡಸುದಾಮನುಕಂಡುಕಡುಸಂತೋಷದಲಿ । ವಡಿಯ ಬಂಕೇಶನಾಅಡಿಯಾಸ್ಮರಿಸುತಲಿ ॥ ಕಡಲೇಶಾಯನಗಿಂದ ಯಡರಿಲ್ಲದಷ್ಟು । ತಡವಿಲ್ಲದೆಕೊಟ್ಟೆಂದುನುಡದಾನು ಹೀಂಗ ॥ ೪ ॥

## ಪದಾ ೩೬

ರಾಗ—ದ್ವಿಜಾವಂತಿ ಆದಿತಾಳ.

ಶರಣುಶ್ರೀಧರಾನಿಮಗೆಶರಣುಭಕ್ತೋದ್ಧಾರಾಶರಣು ಗೋವಳಾಪಾಲನೆ ॥ ಕರಣುವಾಡುವೆನುಹಿರಣ್ಯಾಕ್ಷಿಕ್ಷಕನೆ ಮರಿಯ ಹೊಕ್ಕವರನ್ನು ಕರುಣದಿಂದಲಿ । ದುರಿತದುಃಖ ವನ್ನು ಪರಿಹಾರವಮಾಡುವಉರಗಶೈನಮುಹಾಗಿರಿಧರಕೃಷ್ಣಾ॥ ಪಲ್ಲ ॥ ಏನುಕೊಡದಲಿಹಿಂದಕ್ಕೆನ್ನ ಕಳುಹಿದಿಯೊ । ನಿಧಾ ನವನ್ನು ಮನಿಯೊಳಗೆನೀನುತೋರಿದಿಯೊ ॥ ದಾನವಾರಿ ಯನ್ನ ಮಾನಿನಿಆವಲಕ್ಕೆಆನಂದಾಗಿನೀಪಾನಮಾಡಿದಿ । ದೀ ನರಕ್ಷಕನೆಭಕ್ತಿಯಿಂದನಿನ್ನ ಧ್ಯಾನಮಾಡುವೆನುಮಾನವುಕಾ ಯಿದಿ ॥ ೧ ॥ ದೇವಜಗಉದ್ಧಾರಯನ್ನರಕ್ಷಿಸಿದಿ । ವರರಾ ಜೀವಲೋಚನಾಭಕ್ತವತ್ಸಲೆನಿಶಿದಿ ॥ ಪಾವಕಾಕ್ಷಸಖರಾವ ಣಾರಿನಿನಗ್ಯಾವಯಿದರಯಿಲ್ಲಭೂವನದೊಳು।ಹ್ಯಾವಮಾ ಡಿದಾವಮಾವಕಂಸನಾಜೀವಾಕೊಂದಿರಾಜೀವನಾಭನೆ ॥ ೨ ॥ ಏಸೊಜನ್ಮ ಮಾಡಿದಪೂರ್ಣವದಗಿತಲಾ । ನಾನುಈಶಬಂ ಕನಾಥನಸಖನಕಂಡೇನಲ್ಲಾ ॥ ಆಶರಹಿತಪೋಷಿಸುವಿಜ ಗವುನಿನ್ನ ದಾಸರಾದವರನ್ನು ಘಾಶಿಮಾಡದೆ । ವಾಸುದೇವ ಯನ್ನ ದೋಷತಗದಿನೀಆಶಪೂರೈಶಿದಿಕೇಶವಹರಿಯೆ ॥ ೩ ॥

ಪದಾ ೩೭.

ಕಡಲೇಶಕೃಷ್ಣನ್ನ ಅಡಿಗಡಿಗೆಸ್ತುತಿಸುತಲೆಯಡಬಲದಿ
ಮುಕ್ಕಳುಮಡದಿಕೊಚೆಲಿಯಾವಡಗೂಡಿ ಸುದಾಮನ ನಡುವೆ
ರಥದಲಿಕೂತುನಡಿರೆಂದಿಪಟ್ಟಣಕೆಕಡುಹರುಷದಿಂದಾ ॥
ಬಿಡದೆವದರುವಕಾಳಿಹೊಡುವತಮ್ಮಟಭೇರಿನುಡವನೌಬತ್ತು
ಗಳು ಬಡುವದಿಂಡಿಮಿನಾದ ನಡದಿತುದಂಡವಾಗ್ಗ್ನಿಡದು
ಸುಂದರಪುರವೃತಡವೃಇಲ್ಲದೆಹೊಕ್ಕಶಡಗರದಿಆಗ ॥ ೧ ॥
ಪುರದರಸುಬಂದೆಂದು ಪುರದಜನರೆಲ್ಲಾರುಪರಿಪರಿಯರಂ
ಗೋಲಿತ್ವರಿತದಲಿಹಾಕಿದರುತರಿಸಿತೋರಣವನ್ನು ಹರುಷದ
ಲಿಕಟ್ಟಿದರುಧರಿಗೆಹೊಯದರುನೀರುಸರಸವಾಗಿ ॥ ಅರಸು
ಪುರವನುನೋಡಿಬೆರಗಾಗಿತನ್ನ ಯಅರಮನಿಗೆ ಹೋಗಿಹತ್ತಿ
ರುವರಥವನುಇಳದುತರಿಸಿನಾರೀಫಲವುಕರದಲ್ಲಿ ಹಿಡದುದೇ
ವರಮುಂದೆಬಿಟ್ಟ್ಯಾನುಹರಿಯನಮೋಯಂದು ॥ ೨ ॥ ನಾ
ರಜನಕನಸ್ಮರಿಶಿಚ್ಯಾರುಸಿಂಹಾಸನವು ಏರಿಕೂಡರಲ್ಕೆಶ್ರಿಂಗಾ
ರದಿಂನಾರಿಯರು ಭಾರಕುಚವಾಗಲ್ಕೆ ಜೀರ್ಣನಡವಾದ್ಯಾಗೆ
ತೋರುವಂಥವರುಕಸ್ತೂರಿಫಣಿಗಿಟ್ಟು ॥ ಶೀರಿತರತರಜರ
ತಾರಕುಪ್ಪಸವುಹದಿನಾರುವರುಷಗಳಾದ ಪೂರವಯಸುಳ್ಳಂ
ಥನಾರಿಯರುಆಗ ಭಂಗಾರದೋಸ್ತ್ರವುಇಟ್ಟುಚ್ಯಾರುನೋಟ
ವುನೋಡಿಆರುತಿಯಬೆಳಗಿದರುಸಾರ್ವಗ್ನೀಗೆ ॥ ೩ ॥

## ಪದಾ ೩೮.

॥ ಮಂಗಳಾರ್ತಿಪದಾ ॥ ರಾಗ—ಸಾರಂಗ ಏಕತಾಳ.

ಪರಮಪೀಠದಲಿಕೂತವಗೆ । ಪರತತ್ವದಮಾರ್ಗರಿತವಗೆ ॥ ಪರಮಬಡತನವುಪರಿಹಾರವಾಗದೆ । ಪರಿಪರಿಯಿಂದಮರುಗಿರುವವಗೆ । ಮಂಗಲಂಜಯಮಂಗಲಂ ॥ ೧ ॥ಹರಿಯನೆನಪಮಾಡಿರುವವಗೆ । ಯರಡಮುಷ್ಟಿವಲಕ್ಕಿವಯುದವಗೆ । ಬರುವಶಕುನನೋಡಿ ಹರುಷದಿಂದಲಿ ಮುರಾರಿಪುರಕ್ಹೋಗಿರುವವಗೆ ॥ ೨ ॥ ಯಾದವರಿಂಪಭೆಟ್ಯಾದವಗೆ ಮಾಧವನಾಬಳಿಗ್ಹೋದವಗೆ । ವೈದಲವಲಕ್ಕಿಯ ಪಾದಕಿಟ್ಟುಆಲ್ಹಾದಆದಸುದಾಮುನಿಗೆ ॥ ೩ ॥ ಛಂದಾಗಿ ಊಟಾಮಾಡಿದವಗೆ । ಮುಂದವಿಳದಿವಸಇದ್ದವಗೆ । ಮಂದರೋದ್ಧರನೆಇಂದುಅಪ್ಪಣಿಕೊಡುಯೆಂದುಬೇಗದಿಂಅಂದವಗೆ। ಮಂಗಲಂ ॥ ೪ ॥ ತ್ವರದಿಅಪ್ಪಣಿಪಡಕೊಂಡವಗೆ । ಪುರವದಾಟಮುಂದಬಂದವಗೆ । ಬರಿಗೈಲೆಹಿಂತಿರುಗಿಕಳುಹಿದೆಂದುಮರುಗಿದುಃಖಬಟ್ಟಿರುವವಗೆ। ಮಂಗಲಂಜಯಮಂಗಲಂ ॥ ೫ ॥ ಚಾರುಸುಂದರಪುರನೋಡಿದವಗೆ। ದ್ವಾರಕಾವೆಂದುತಿಳದವಗೆ । ದಾರಪುರೆಂದುದಾರಿಗರನ್ನ ಕೇಳಿ। ಊರಿಗೆಬಂದಂಥಾಧೀರನಿಗೆ ॥ ಮಂ ॥ ೬ ॥ ಅರಸಿಯಿಂದಸಹಿತಾದವಗೆ । ಹರಿಯುಕೊಟ್ಟಸೌಭಾಗ್ಯನಿಗೆ । ವರಬಂಕನಾಥನ

ಪರಮಪ್ರಿಯ್ಯನಾಸ್ಮರಣಿಮಾಡುತೀಗಿರುವವಗೆ ॥ ಮಂಗ
ಲಂಜಯಮಂಗಲಂ ॥ ೬ ॥

ಪದ ೩೯.

ಮಂದಗಮನಿಯರುಹೀಗೆಂದುಆರುತಿಯ ಆನಂದದ
ಲಿಚೆಳಗಲುಬಂದಜನರೆಲ್ಲಾರುಭಂದ ಮಾಣಿಕಗಳುತಂದು
ವಸ್ತ್ರಭರಣಸುಂದ॥ ರಾಧೀಶನಾಮುಂದೆಯಿಟ್ಟು ॥ ವಂದನೆ
ಯಮಾಡಲ್ಕೆ ಬಂದಜನರಿಗೆ ಹರುಷದಿಂದಕುಳ್ಳಿರೆಸೀವುಯೆಂ
ದುಮನ್ನಣಿಮಾಡಿಹಿಂದಿನಕಥಿಯಲ್ಲಾ ವಂದುಬಿಡದಲೆಆವ
ರಮುಂದಲುಸರಿದನಾಗಭಂದದಿಂದಾ ॥ ೧ ॥ ಅಷ್ಟುಜನರಿಗೆ
ಆಗಕೊಟ್ಟು ವೀಳ್ಯೆವುಸಂತುಷ್ಟಮಾಡಲ್ಕೆವರುಧಿಟ್ಟರಾಜನಪ
ದಕೆಮುಟ್ಟಬಂದನೆಮಾಡಿಬಿಟ್ಟುಆರಮನೆಯುನ್ನು ಥಟ್ಟನೆಗೃ
ಹಗಳಿಗೆಮುಟ್ಟದರುಬಂದು ॥ ಸೃಷ್ಟಿಯೊಳುಈ ಕಥಿಯಾನಿ
ಷ್ಟೆಯಲಿ ಕೇಳಿದವರಕಷ್ಟದೂರಾಗುವದು ದುಷ್ಟಗ್ರುಹಗಳು
ನಾನಾರಿಷ್ಟನಾಶವುಆಗಿಬಿಟ್ಟುಓಡುವನೆಲ್ಲ ಕಟ್ಟುವಡುಕಲ್ಯಾ
ಣಕಟ್ಟಕಡಿಗೆ ॥ ೨ ॥ ನೀಲವರ್ಣನಮುಹಿಮಿಲಾಲಿಸಿಕೇಳಿದ
ವರಮೂಲಬಡತನಹೋಗಿಆಳುವರು ರಾಜ್ಯವನುಬಾಲಕರು
ಆಗುವರು ಕಾಲನಾಭಯ ಹೋಗಿಮೇಲಸ್ವರ್ಗಾಗುವದು
ಬಾಲೆಕೇಳು ॥ ನೀಲಕಂದರಹೀಗೆಪೇಳುತಿರೆ ಪಾರ್ವತಿಗೆಕೇಳಿ
ಮನಸಿನವಳಗೆಬಹಳ್ಳರುಷಾಯಿತು ಶೇಲಬಂಕನಾಥನುಬಾ

ಲಸಕ್ರನಾಯಿಕನ ಮೇಲೆದಯವಿಟ್ಟದನಪಾಲಿಸಿ ಮುಗಿಸಿದ ನುನಾಲ್ಕುಅಧ್ಯಾಯಾ ॥ ೩ ॥ ಇತಿಶ್ರೀಸುದಾಮಚರಿತ್ರಚತುರ್ಥೋಽಧ್ಯಾಯಸಂಪೂರ್ಣಮಸ್ತು.

ಪದಾ ೪೦.

॥ ಮಂಗಳಾರತಿ ಪದಾ ॥ ರಾಗ—ರೇಗುಪ್ತಿ ತಾಳ ರೂಪಕ.

ಮಂಗಳಾರುತಿಯತ್ತಿರೆ । ನಾರಿಯರೆಲ್ಲಾಅಂಗಜಪಿತ ಹರಿಗೆ ॥ ಮಂಗಳಾರುತಿಯತ್ತಿರೆಶ್ರಿಂಗಾರದಲಿ ನೀವೆಲ್ಲಾ ಕೂಡಿ।ಭೃಂಗನಿಭಕರಅಂಗವರ್ನಮತಂಗವರದಾರಂಗಸ್ವಾಮಿಗೆ ॥ ಪಲ್ಲ ॥ ಹರಿಯೊಳಗೆಪೊಕ್ಕು । ವೇದವತಂದು । ಗಿರಿಭಾರವಹಿಸಿದಗೆ ॥ ಧರಿಯಚೋರನಶಿರವನರಿದುಸುರರ ಪರಿಪಾಲಮಾಡಿದವಗೆ । ತರುಳಗೊಲಿದುದುರುಳದೈತ್ಯನಕರಳಹರದಾನಾರಸಿಂಗೆ ॥ ೧ ॥ ಬಡವನಾಗಿಬಂದು । ಪೊಡವಿಯಮೂರ । ಅಡಿದಾನಾಬೇಡಿದವಗೆ ॥ ಕೊಡಲಿಪಿಡಿದು ಕಡಿದು ಮಾತಿನುಡದಿಕಳಕೊಂಡದವಿತಿರಿಗಿ । ಬಿಡದೆಕಪಿಗಳಕೂಡಿಕೊಂಡುಕಡಲದಾಟಿದವಡಿಯರಾಮಗ ॥ ೨ ॥ ವೀರಕಂಸನ್ನಾ ಕೊಂದು । ತ್ರಿಪುರಸಂಹಾರವುಮಾಡಿದವಗೆ ॥ ಚ್ಯಾರುತುರಗವು ಏರಿಕೊಂಡುಧೀರಅಸುರರಗೆಲಿದವಗೆ । ಧಾರುಣಿಯೊಳುಮೆರುವಇಂಚಲಶಾರಧೀಶನಮಿತ್ರನಾದಗೆ। ಮಂಗ ॥ ೩ ॥



## ನಮ್ಮ ಬುಕ್ಕಡಿಪೋದಲ್ಲಿ ದೊರೆಯು...

ಕನ್ನಡ ಗುರುಚರಿತ್ರ
ಪಟ್ಟರಾಮಾಯಣ
ಪಟ್ಟಭಾರತ
ಕೃಷ್ಣಚರಿತ್ರ
ರಾಮಕೃಷ್ಣ ಪರಮಹಂಸ ಸದ್ಬೋಧ ಸಂಗ್ರಹ
ಶನಿದೇವರ ಮಹಾತ್ಮೆಲಿ
ಶ್ರೀವರದಶಂಕರ ಕಥಾಮೃತವು
ಸಚಿತ್ರ ಭಕ್ತಿವಿಜಯ
ಬೃಹಸ್ತೋತ್ರ ರತ್ನಾಕರ
ಶಿವಗೀತಾ ಕನ್ನಡ ಟೀಕಾ ಸಾರ್ಥ
ನೀತಿಮುಕ್ತಾಹಾರ ಅಥವಾ ಸುಬೋಧ ವಚನ
ಗದ್ಯಪದ್ಯಾತ್ಮಕ ಶಿವರಾತ್ರಿ ಕಥೆಯು
ಕೈವಲ್ಯ ನವನೀತ
ಗರ್ಭಗೀತೆ ಸುಧಾರಿಸಿದ ಆವೃತ್ತಿ
ಗರ್ಭಗೀತೆ ವಚನರೂಪ
ಸತ್ಯ ಹರಿಶ್ಚಂದ್ರ ಮಹಾರಾಯನ ಕಥೆ
ಸಂಧಿ ಜೈಮಿನಿಭಾರತ ಕಥಾಸಂಗ್ರಹ

---

ಇವುಗಳ ಹೊರ್ತು ನಮ್ಮ ಕಡೆಗೆ ಎಲ್ಲ ತರದ ಶಾಲೋಪಯೋ...
ಮರಾಠಿ, ಗುಜರಾಥಿ, ಹಿಂದುಸ್ತಾನೀ ಮುಂತಾದ ನಾನಾತರದ ...
ಸಂಸ್ಕೃತ, ಪ್ರಾಕೃತ, ಕಾವ್ಯಗ್ರಂಥಗಳು ಯೋಗ್ಯ ಕ್ರಯಕ್ಕೆ ದೊ...

**ದತ್ತಾಜೀರಾವ ಆಬಾಜೀರಾವ ...**

ಶ್ರೀರಾಮತತ್ತ್ವ-ಪ್ರಕಾಶ ಛಾಪಖಾನೆಯು...